KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಅಕ್ಟೋಬರ್ ೧, ೨೦೦೯ (ಆಶ್ವಯುಜ ೯, ಶಕ ವರ್ಷ ೧೯೩೧) | ಸಂಚಿಕೆ ೩೯ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ವಸತಿ ಸಚಿವಾಲಯ

**ವಿಷಯ:** ಕೇಂದ್ರ ಪುರಸ್ಕೃತ ನರ್ಮ್ ಯೋಜನೆಯ ಐಹೆಚ್‌ಎಸ್‌ಡಿಪಿ ಯೋಜನೆಯ ಅನುಷ್ಠಾನಕ್ಕೆ ಕೇಂದ್ರ ಹಾಗೂ ರಾಜ್ಯದ ಪಾಲಿನ ಅನುದಾನದ ಬಿಡುಗಡೆ ಬಗ್ಗೆ.

**ಓದಲಾಗಿದೆ:** 1) ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ ಇವರ ಪತ್ರ ಸಂಖ್ಯೆ:ಕಕೊನಿಮ:ಲೆ.ಪ.ಶಾ: ನರ್ಮ್/ಐಹೆಚ್‌ಎಸ್‌ಡಿಪಿ:2009–10, ದಿ:28–04–09.

2) ಸರ್ಕಾರದ ಆದೇಶ ಸಂಖ್ಯೆ:ವಇ 60 ಕೊಮಂಲೆ 05 (ಭಾ), ದಿನಾಂಕ:06–08–07, 27–03–2008, 31–03–2008 (ತಿದ್ದುಪಡಿ), 21–08–2008.

3) ಆರ್ಥಿಕ ಇಲಾಖೆ (ವೆಚ್ಚ 3/9) ಹಿಂಬರಹ ಸಂಖ್ಯೆ:FD 324 Exp–9/09, ದಿನಾಂಕ:06–07–2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ಆಯುಕ್ತರು ಸಮಗ್ರ ವಸತಿ ಮತ್ತು ಕೊಳಚೆ ಪ್ರದೇಶ ಅಭಿವೃದ್ಧಿ ಯೋಜನೆಯಡಿಯಲ್ಲಿ 25 ನಗರ/ಪಟ್ಟಣಗಳಲ್ಲಿ ನಿರ್ಮಿಸುತ್ತಿರುವ ಮನೆಗಳ ನಿರ್ಮಾಣ ಹಾಗೂ ಮೂಲಭೂತ ಸೌಲಭ್ಯಗಳ ಕಾಮಗಾರಿಗಳು ಪ್ರಗತಿಯಲ್ಲಿರುವುದರಿಂದ ಹಾಗೂ ನಿಗಧಿತ ಅವಧಿಯೊಳಗೆ ಕೈಗೊಂಡಿರುವ ಯೋಜನೆಯನ್ನು ಪೂರ್ಣಗೊಳಿಸುವ ಉದ್ದೇಶದಿಂದ ಮೊದಲನೇ ಕಂತಿನ ಉಳಿಕೆ ರಾಜ್ಯ ಸರ್ಕಾರದ ವಂತಿಗೆ ರೂ.3968.97 ಲಕ್ಷಗಳನ್ನು 2009–10ನೇ ಸಾಲಿನ ಆಯವ್ಯಯದಲ್ಲಿ ಒದಗಿಸಿರುವ ಮೊತ್ತದಲ್ಲಿ ಮಂಡಳಿಗೆ ಬಿಡುಗಡೆ ಮಾಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಕೇಂದ್ರ ಸರ್ಕಾರದ ವಂತಿಗೆ ರೂ.7288.07 ಲಕ್ಷಗಳನ್ನು ಮತ್ತು ರಾಜ್ಯ ಸರ್ಕಾರದ ವಂತಿಗೆ ರೂ.561.55 ಲಕ್ಷಗಳನ್ನು ಉಲ್ಲೇಖ (2) ರಲ್ಲಿ ತಿಳಿಸಿರುವ ಸರ್ಕಾರಿ ಆದೇಶಗಳಲ್ಲಿ ಬಿಡುಗಡೆಗೊಳಿಸಲಾಗಿರುತ್ತದೆ ವಿವರ ಕೆಳಕಂಡಂತಿದೆ:

(ರೂ.ಲಕ್ಷಗಳಲ್ಲಿ)

| ಕೇಂದ್ರದ ಪಾಲು | ರಾಜ್ಯದ ಪಾಲು |
|---|---|
| 1413.49 | 089.51 |
| 0681.45 | 210.00 |
| 0895.17 | 262.04 |
| 1996.13 | |
| 2301.83 | |
| **ಒಟ್ಟು 7288.07** | **561.55** |

ಮೊದಲನೇ ಕಂತಿನ ರಾಜ್ಯ ಸರ್ಕಾರದ ವಂತಿಗೆ ರೂ.4530.52 ಲಕ್ಷಗಳಲ್ಲಿ (IEC & O&M Cost ರೂ.2391.00 ಲಕ್ಷಗಳನ್ನು ಹೊರತುಪಡಿಸಿ) ಮನೆಗಳನ್ನು ನಿರ್ಮಿಸಲು ರೂ.561.55 ಲಕ್ಷಗಳನ್ನು ಮಾತ್ರ ಬಿಡುಗಡೆ ಮಾಡಿದ್ದು, ಮೊದಲನೇ ಕಂತಿನ ಉಳಿಕೆ ರಾಜ್ಯ ಸರ್ಕಾರದ ವಂತಿಗೆ ರೂ.3968.97 ಲಕ್ಷಗಳನ್ನು 2009–10ನೇ ಸಾಲಿನ ಆಯವ್ಯಯದಲ್ಲಿ ಐಹೆಚ್‌ಎಸ್‌ಡಿಪಿ ಲೆಕ್ಕ ಶೀರ್ಷಿಕೆ 2217–04–191–2–03 ಯಡಿಯಲ್ಲಿ ರೂ.5500.00 ಲಕ್ಷಗಳನ್ನು ಒದಗಿಸಲಾಗಿರುವುದರಿಂದ ಉಳಿಕೆ ರಾಜ್ಯದ ಪಾಲನ್ನು ಬಿಡುಗಡೆ ಮಾಡಬೇಕೆಂದು ಕೋರಿದ್ದರ ಪ್ರಸ್ತಾವನೆಗೆ ಮೇಲೆ ಓದಲಾದ ಉಲ್ಲೇಖ (3)ರಲ್ಲಿ ಸರ್ಕಾರದ ಪ್ರಸ್ತಾವನೆಯನ್ನು ಪರಿಶೀಲಿಸಿ, ಆರ್ಥಿಕ ಇಲಾಖೆಯು ತನ್ನ ಹಿಂಬರಹದಲ್ಲಿ ರೂ.16.02 ಕೋಟಿಯನ್ನು ರಾಜ್ಯ ಸರ್ಕಾರದ ಪಾಲಾಗಿ ಬಿಡುಗಡೆಗೊಳಿಸಿರುತ್ತದೆ.

ಸರ್ಕಾರ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 10 ಕೊಮಂಲೆ 2009, ಬೆಂಗಳೂರು, ದಿನಾಂಕ: 17ನೇ ಜುಲೈ 2009**

ಪ್ರಸ್ತಾವನೆಗಳಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಸಮಗ್ರ ವಸತಿ ಮತ್ತು ಕೊಳಚೆ ಪ್ರದೇಶ ಅಭಿವೃದ್ಧಿ ಯೋಜನೆಯಡಿ ಮನೆಗಳ ನಿರ್ಮಾಣ ಮತ್ತು ಮೂಲಭೂತ ಸೌಲಭ್ಯಗಳಿಗಾಗಿ ರಾಜ್ಯದ ಪಾಲಾಗಿ ರೂ.16.02 ಕೋಟಿ (ರೂಪಾಯಿ ಹದಿನಾರು ಕೋಟಿ ಎರಡು ಲಕ್ಷ ಮಾತ್ರ) ಯನ್ನು 2009–10ನೇ ಸಾಲಿನಲ್ಲಿ (ಘಟಕ ವೆಚ್ಚ ರೂ.80,000 ದಂತೆ) ಐಹೆಚ್‌ಎಸ್‌ಡಿಪಿ ಲೆಕ್ಕ ಶೀರ್ಷಿಕೆ 2217–04–191–2–03–106 ಯಡಿಯಲ್ಲಿ ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ ಬಿಡುಗಡೆ ಮಾಡಿ ಸರ್ಕಾರ ಆದೇಶಿಸಿದೆ.

ಕಾಲಕಾಲಕ್ಕೆ ಕೇಂದ್ರದಿಂದ ಹೊರಡಿಸುವ ಸೂಚನೆ, ಮಾರ್ಗಸೂಚನೆ, ಕೇಂದ್ರ ಸಿಎಸ್‌ಸಿ ಸಭೆಯ ನಡವಳಿಯಲ್ಲಿ ನೀಡಿರುವ ಸೂಚನೆ, ಎಸ್‌ಎಲ್‌ಇಸಿ (ಐಹೆಚ್‌ಎಸ್‌ಡಿಪಿ) ಸೂಚನೆಗಳನ್ನು ಕಟ್ಟುನಿಟ್ಟಾಗಿ ಪಾಲಿಸುವುದರ ಜೊತೆಗೆ ಕೆಳಕಂಡ ಷರತ್ತುಗಳನ್ನು ಪಾಲಿಸಬೇಕೆಂದು ಸೂಚಿಸಲಾಗಿದೆ.

1. ಈ ಮೊತ್ತವನ್ನು ಯಾವ ಉದ್ದೇಶಕ್ಕೆ ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಬಳಸತಕ್ಕದ್ದು.
2. ಫಲಾನುಭವಿಗಳಿಂದ ವಂತಿಕೆಯು ನಿಯಮಿತವಾಗಿ ಪಾವತಿಯಾಗುವಂತೆ ಕ್ರಮ ವಹಿಸತಕ್ಕದ್ದು.
3. ಯೋಜನೆಯ ಅನುಷ್ಠಾನದ ಹಂತದ ಬಗ್ಗೆ ಕಾಲಕಾಲಕ್ಕೆ ವರದಿಗಳನ್ನು ರಾಜ್ಯ ಸರ್ಕಾರಕ್ಕೆ/ಕೇಂದ್ರ ಸರ್ಕಾರಕ್ಕೆ ನೀಡತಕ್ಕದ್ದು.
4. ಈ ಆದೇಶದಲ್ಲಿ ಬಿಡುಗಡೆ ಮಾಡಲಾಗಿರುವ ಅನುದಾನದ ಬಗ್ಗೆ ಪ್ರತ್ಯೇಕ ಲೆಕ್ಕವನ್ನು ಇಡತಕ್ಕದ್ದು.
5. ಸರ್ಕಾರಕ್ಕೆ ಆಡಿಟ್ ವರದಿಯನ್ನು ನಿಗದಿತ ಸಮಯಕ್ಕೆ ಸಲ್ಲಿಸತಕ್ಕದ್ದು.
6. ನಿಗಧಿತ ಅವಧಿಯೊಳಗೆ ಬಳಕೆ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು.
7. ಈ ಆದೇಶದಲ್ಲಿ ಬಿಡುಗಡೆಗೊಳಿಸಲಾಗಿರುವ ಮೊತ್ತವನ್ನು ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಯು, ವಸತಿ ಇಲಾಖೆಯ ಉಪ ಕಾರ್ಯದರ್ಶಿಯವರ ಮೇಲು ಸಹಿ ಪಡೆದ ನಂತರ ಪಡೆಯತಕ್ಕದ್ದು.

ಮುಂದುವರೆದು, ಕೇಂದ್ರದ ನೂತನ ಮಾರ್ಗಸೂಚಿಯನ್ವಯ ಐಹೆಚ್‌ಎಸ್‌ಡಿಪಿ ಯೋಜನೆಯಡಿ ನಿರ್ಮಿಸುವ ಮನೆಗಳ ಘಟಕ ವೆಚ್ಚವನ್ನು 2007–08 ಮತ್ತು 2008–09ನೇ ಸಾಲಿಗೆ ರೂ.80,000 ದಿಂದ ರೂ.1 ಲಕ್ಷಕ್ಕೆ ಹೆಚ್ಚಿಸಲು, ಅದರಂತೆ ರಾಜ್ಯದ ಪಾಲನ್ನು ಒದಗಿಸಲು ಆರ್ಥಿಕ ಇಲಾಖೆಯು ಅನುಮೋದನೆ ನೀಡಿದ್ದು, ಉಳಿದಂತೆ ಕೊರತೆಯನ್ನು ಫಲಾನುಭವಿಗಳು ಭರಿಸಲು (. . . for the remaining gap the beneficiary should be asked to contribute) ಕೋರಬಹುದೆಂದು ಸೂಚಿಸಿರುವುದರಿಂದ ಅದರಂತೆ ಕ್ರಮ ವಹಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಹಿಂಬರಹ ಸಂಖ್ಯೆ:ಎಫ್‌ಡಿ 324 ವೆಚ್ಚ–9/2009, ದಿನಾಂಕ:06–07–2009. ಸೂಚನೆಯಂತೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1883

**ಜಿ.ಆರ್. ನಾಗರಾಜ**

ಪೀಠಾಧಿಕಾರಿ–4, ವಸತಿ ಇಲಾಖೆ.

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ:** ಕೋಲಾರ ಜಿಲ್ಲಾ ಗ್ಯಾಸೆಟಿಯರ್‌ನ ಆಂಗ್ಲ ಆವೃತ್ತಿಯ ಮುದ್ರಣ ಮತ್ತು ಪ್ರಕಟಣೆ ಆಡಳಿತಾತ್ಮಕ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:** ಮುಖ್ಯಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ ಬೆಂಗಳೂರು ಇವರ ಪತ್ರ ಸಂ:ಕಗ್ಯಾಇ/ ಕೋಜಿಗ್ಯಾ/2009–10 ದಿ: 21.05.2009 ಮತ್ತು 03.07.2009

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 21.05.2009 ಮತ್ತು 03.07.2009ರ ಪತ್ರದಲ್ಲಿ ಮುಖ್ಯಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು ಇವರು 2009–10ನೇ ಸಾಲಿನ ಆಯವ್ಯಯದಲ್ಲಿ ಯೋಜನಾ ಲೆಕ್ಕಶೀರ್ಷಿಕೆಯಡಿ ರೂ.20.00 ಲಕ್ಷಗಳ ಅನುದಾನ ಮಂಜೂರು ಮಾಡಿದ್ದು, 2008–09ನೇ ಸಾಲಿನಲ್ಲಿ ಕೋಲಾರ ಜಿಲ್ಲೆಯ ಎಲ್ಲಾ ಅಧ್ಯಾಯಗಳನ್ನು ಆಂಗ್ಲ ಭಾಷೆಗೆ ಭಾಷಾಂತರಿಸಲಾಗಿದ್ದು, ಇದನ್ನು ಸಂಪಾದಿಸಿ, ಮುದ್ರಿಸಲು ಉದ್ದೇಶಿಸಲಾಗಿರುತ್ತದೆ. ಈ ಸಂಪಾದನೆ ಮತ್ತು ಮುದ್ರಣಕ್ಕೆ ತಗಲುವ ವೆಚ್ಚ ರೂ.3.50 ಲಕ್ಷಗಳನ್ನು 2009–10ನೇ ಸಾಲಿನಲ್ಲಿ ಇಲಾಖೆಗೆ ಮಂಜೂರು ಮಾಡಿರುವ ರೂ.20.00 ಲಕ್ಷಗಳಲ್ಲಿ ಭರಿಸಲು ಆಡಳಿತಾತ್ಮಕ ಮಂಜೂರಾತಿ ನೀಡಬೇಕೆಂದು ಕೋರಿರುತ್ತಾರೆ. ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 8 ಕರಾಗೆ 2009, ಬೆಂಗಳೂರು, ದಿನಾಂಕ: 20ನೇ ಆಗಸ್ಟ್ 2009**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ಕೋಲಾರ ಜಿಲ್ಲಾ ಗ್ಯಾಸೆಟಿಯರ್‌ನ ಆಂಗ್ಲ ಆವೃತ್ತಿಯ ಮುದ್ರಣ ಮತ್ತು ಪ್ರಕಟಣೆಗೆ ರೂ.3,50,000–00 (ರೂಪಾಯಿ ಮೂರು ಲಕ್ಷ ಐವತ್ತು ಸಾವಿರ ಮಾತ್ರ) ಗಳನ್ನು ಮುಖ್ಯಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು ಅವರಿಗೆ ಬಿಡುಗಡೆ ಮಾಡಲು ಸರ್ಕಾರದ ಅನುಮತಿ ನೀಡಲಾಗಿದೆ. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಕಾಯ್ದೆ 1999 ಮತ್ತು ಅದರ ನಿಯಮಗಳು 2000ನ್ನು ಅನುಸರಿಸುವುದು.

ಈ ಮೊತ್ತವನ್ನು 2009–10ನೇ ಸಾಲಿನ ಲೆಕ್ಕ ಶೀರ್ಷಿಕೆ 3454–02–110–0– 01–059 (ಯೋಜನೆ) ಇತರೆ ಖರ್ಚು ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರ ಟಿಪ್ಪಣಿ ಸಂ: ಶಿಇ 1783 ಐಎಫ್(ಬಿ.ಎ) 2009 ದಿ: 05.08.2009 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹಾಗೂ ಆರ್ಥಿಕ ಇಲಾಖೆಯ ಆದೇಶ ಸಂ:ಎಫ್.ಡಿ. 1 ಟಿ.ಎಫ್.ಪಿ 96 ದಿನಾಂಕ:10–7–96ರಲ್ಲಿ ಸರ್ಕಾರದ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಕೆ. ಧರ್ಮರಾಜಪ್ಪ**

ಪಿ.ಆರ್. 2009 ಸರ್ಕಾರದ ಅಧೀನ ಕಾರ್ಯದರ್ಶಿ

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ).

**ವಿಷಯ:** ಶ್ರೀ ಅಶೋಕ ಬಿ.ಎಸ್. ಇವರನ್ನು ಅಧ್ಯಕ್ಷರು, ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಆಪ್ತಶಾಖೆಯಲ್ಲಿ ಆಪ್ತ ಸಹಾಯಕರಾಗಿ ಗುತ್ತಿಗೆ ಆಧಾರದ ಮೇಲೆ ನೇಮಿಸುವ ಬಗ್ಗೆ.

**ಓದಲಾಗಿದೆ:** ಕಾರ್ಯದರ್ಶಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ ಅವರ ಟಿಪ್ಪಣಿ ಸಂಖ್ಯೆ: ಕಅಪ್ರಾ/ಅ/63/09–10 ದಿನಾಂಕ:25.05.2009.

**ಪ್ರಸ್ತಾವನೆ:**

ಅಧ್ಯಕ್ಷರು, ಕನ್ನಡ ಅಭಿವೃದ್ಧಿ ಪ್ರಾಧಿಕಾರ ಅವರು ಮೇಲೆ ಓದಲಾದ ದಿನಾಂಕ 25.05.2009.ರ ಪತ್ರದಲ್ಲಿ ಶ್ರೀ ಅಶೊಕ ಬಿ.ಎಸ್, ನಂ.15, ಕನಕಪುರ ಮುಖ್ಯರಸ್ತೆ, ಯಲಚೇನಹಳ್ಳಿ, ಬೆಂಗಳೂರು ಇವರನ್ನು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಆಪ್ತಶಾಖೆಯಲ್ಲಿ ಆಪ್ತ ಸಹಾಯಕರಾಗಿ ಗುತ್ತಿಗೆ ಆಧಾರದ ಮೇಲೆ ನೇಮಿಸುವ ಬಗ್ಗೆ ಪ್ರಸ್ತಾಪಿಸಿದ್ದು, ದಿನಾಂಕ 26.05.2009ರಿಂದಲೇ ಜಾರಿಗೆ ಬರುವಂತೆ ಆಪ್ತಸಹಾಯಕರಾಗಿ ನೇಮಕ ಮಾಡಿ ಆದೇಶ ನೀಡಬೇಕೆಂದು ಕೋರಿರುತ್ತಾರೆ.

ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 31 ಕೆಓಎಲ್ 2009, ಬೆಂಗಳೂರು, ದಿನಾಂಕ: 22ನೇ ಆಗಸ್ಟ್ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ಶ್ರೀ ಅಶೋಕ ಬಿ.ಎಸ್. ಇವರನ್ನು ದಿನಾಂಕ 26.05.2009 ರಿಂದಲೇ ಜಾರಿಗೆ ಬರುವಂತೆ ಅಧ್ಯಕ್ಷರು, ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಆಪ್ತಶಾಖೆಯಲ್ಲಿ ಆಪ್ತ ಸಹಾಯಕರಾಗಿ ಗುತ್ತಿಗೆ ಆಧಾರದ ಮೇಲೆ ನೇಮಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಇವರ ನೇಮಕಾತಿ ಷರತ್ತು ಮತ್ತು ನಿಬಂಧನೆಗಳನ್ನು ನಂತರ ಹೊರಡಿಸಲಾಗುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಸಹಮತಿಯನ್ನು ಟಿಪ್ಪಣಿ ಸಂಖ್ಯೆ: ಆಇ 611 ವೆಚ್ಚ–7/2009 ದಿನಾಂಕ 07.07.2009ರಲ್ಲಿ ಪಡೆದು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ಧರ್ಮರಾಜಪ್ಪ**

ಪಿ.ಆರ್. 2022 ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ವಿಷಯ:** ಧಾರವಾಡ ಜಿಲ್ಲೆಯಲ್ಲಿ ಕರ್ನಾಟಕ ಕುಲ ಪುರೋಹಿತ ಅಲೂರು ವೆಂಕಟರಾವ್ ಅವರ ಸ್ಮಾರಕಕ್ಕೆ ಅನುದಾನ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ಇವರ ಪತ್ರ ಸಂ:ಕಸನಿ:15:ಸ್ಮಾರಕ: 2009–10, ದಿ:01.07.2009.

**ಪ್ರಸ್ತಾವನೆ:**

ಮೇಲೆ ಓದಲಾದ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಅವರ ದಿನಾಂಕ: 01.07.2009ರ ಪತ್ರದಲ್ಲಿ 2007–08ನೇ ಸಾಲಿನ ಆಯವ್ಯಯದಲ್ಲಿ ಧಾರವಾಡ ಜಿಲ್ಲೆಯಲ್ಲಿ ಆಲೂರು ವೆಂಕಟರಾವ್ ರವರ ಸ್ಮಾರಕಕ್ಕೆ ರೂ.95.00ಲಕ್ಷಗಳನ್ನು ಜಿಲ್ಲಾಧಿಕಾರಿಗಳು ಧಾರವಾಡ ಜಿಲ್ಲೆ ಇವರಿಗೆ ಬಿಡುಗಡೆ ಮಾಡಲಾಗಿದೆ. ಈ ಕಟ್ಟಡದಲ್ಲಿ ಇನ್ನು ಕೆಲವು ಕೆಲಸಗಳಾದ ವಿದ್ಯುತ್ ಶಕ್ತಿ ಜೋಡಣೆ, ವಾಚನಾಲಯಕ್ಕೆ ಪ್ರದರ್ಶನಾಂಗಣಕ್ಕೆ ಅವಶ್ಯವಿರುವ ಪೀಠೋಪಕರಣ ವ್ಯವಸ್ಥೆಗಳು ಅಗತ್ಯವಿದ್ದು, ಈ ಕಾರ್ಯಗಳಿಗೆ ಜಿಲ್ಲಾಡಳಿತವು ಈಗಾಗಲೇ ಹಣಕಾಸಿನ ಮಂಜೂರಾತಿ ನೀಡಿದ್ದು, ಬೇಡಿಕೆಯನ್ನು ಸಲ್ಲಿಸಿದ್ದು ತಕ್ಷಣವೇ ಅನುದಾನ ಒದಗಿಸುವಂತೆ ರೂ.15.00ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಜಿಲ್ಲಾಧಿಕಾರಿಗಳು, ಧಾರವಾಡ ಜಿಲ್ಲೆಯವರು ಕೋರಿರುತ್ತಾರೆ. ಸದರಿ ಮೊತ್ತವನ್ನು ಬಿಡುಗಡೆ ಮಾಡಲು ಸರ್ಕಾರದ ಆದೇಶ ಹೊರಡಿಸಬೇಕೆಂದು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯವರು ಕೋರಿರುತ್ತಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸಿರುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 25 ಸ್ಮಾಪ್ರನಿ 2009, ಬೆಂಗಳೂರು, ದಿನಾಂಕ: 22ನೇ ಆಗಸ್ಟ್ 2009**

ಧಾರವಾಡ ಜಿಲ್ಲೆಯಲ್ಲಿ ಆಲೂರು ವೆಂಕಟರಾವ್ ಅವರ ಸ್ಮಾರಕ ನಿರ್ಮಿಸಲು ರೂ.15.00ಲಕ್ಷಗಳನ್ನು (ರೂಪಾಯಿ ಹದಿನೈದು ಲಕ್ಷಗಳು ಮಾತ್ರ)ಗಳನ್ನು ಜಿಲ್ಲಾಧಿಕಾರಿಗಳು, ಧಾರವಾಡ ಜಿಲ್ಲೆ, ಇವರಿಗೆ ಬಿಡುಗಡೆ ಮಾಡಲು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಅವರಿಗೆ ಈ ಕೆಳಕಂಡ ಷರತ್ತಿಗೆ ಒಳಪಟ್ಟು ಸರ್ಕಾರದ ಮಂಜೂರಾತಿ ನೀಡಿದೆ.

1. ಈ ಅನುದಾನವನ್ನು ಯಾವ ಉದ್ದೇಶಕ್ಕಾಗಿ ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಬಳಕೆಯಾಗುವಂತೆ ಇಲಾಖೆಯು ನೋಡಿಕೊಳ್ಳತಕ್ಕದ್ದು.
2. ಈ ಮೊತ್ತವು ಸದರಿ ಯೋಜನೆಗೆ ಒಂದು ಸಮಯದ ಅನುದಾನ ವಾಗಿರುತ್ತದೆ.
3. ಈ ಸ್ಮಾರಕದ ಕಾಮಗಾರಿಯನ್ನು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಉಸ್ತುವಾರಿಯಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಕಾಯ್ದೆ 1999 ಹಾಗೂ ಅದರ ನಿಯಮಗಳು 2000ರ ಅಡಿ ಟೆಂಡರ್ ಪ್ರಕ್ರಿಯೆ ಪೂರೈಸಿ ತೆಗೆದುಕೊಳ್ಳಬೇಕೆಂದು ಹಾಗೂ ನಂತರದ ನಿರ್ವಹಣೆ ಇಲಾಖೆಯೇ ನೋಡಿಕೊಳ್ಳತಕ್ಕದ್ದು.
4. ಈ ಯೋಜನೆಗೆ ಹಿಂದಿನ ಸಾಲಿನಲ್ಲಿ ಬಿಡುಗಡೆ ಮಾಡಿರುವ ಅನುದಾನಕ್ಕೆ ಹಣ ಬಳಕೆ ಪ್ರಮಾಣ ಪತ್ರ ಪಡೆದು ಪ್ರಸ್ತುತ ಕಟ್ಟಡದ ಕಾಮಗಾರಿಯು ಯಾವ ಹಂತದಲ್ಲಿ ನಡೆಯುತ್ತಿದೆ ಎಂಬುದನ್ನು ಖಚಿತಪಡಿಸಕೊಳ್ಳುವುದು.

ಈ ಮೊತ್ತವನ್ನು 2009–10ನೇ ಸಾಲಿನ ಲೆಕ್ಕ ಶೀರ್ಷಿಕೆ 2205–00–102–4–03–100 (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಕನ್ನಡ ಮತ್ತು ಸಂಸ್ಕೃತಿ, ವಾರ್ತಾ, ಪ್ರವಾಸೋದ್ಯಮ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿಯನ್ನು ಟಿಪ್ಪಣಿ ಸಂಖ್ಯೆ: ಶಿಇ 1813 ಐಎಫ್ (ಬಿ&ಎ) 2009, ದಿನಾಂಕ: 11–08–09 ರಲ್ಲಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಕೆ. ಧರ್ಮರಾಜಪ್ಪ**

ಪಿ.ಆರ್. 2023 ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ).

**ವಿಷಯ:** ಹಾವೇರಿ ಜಿಲ್ಲೆಯ ಬ್ಯಾಡಗಿ ತಾಲ್ಲೂಕು ಮೊಟೆಬೆನ್ನೂರಿನಲ್ಲಿ ಹುತಾತ್ಮ ಮೈಲಾರ ಮಹದೇವಪ್ಪ ರವರ ಹೆಸರಿನಲ್ಲಿ ಸ್ಮಾರಕ ಭವನ ನಿರ್ಮಾಣ ಮಾಡುವ ಕುರಿತು.

**ಪ್ರಸ್ತಾವನೆ:**

2009–10ನೇ ಸಾಲಿನ ಆಯವ್ಯಯದಲ್ಲಿ ಸನ್ಮಾನ್ಯ ಮುಖ್ಯಮಂತ್ರಿಗಳು ಹಾವೇರಿ ಜಿಲ್ಲೆಯ ಬ್ಯಾಡಗಿ ತಾಲ್ಲೂಕಿನ ಮೊಟೆಬೆನ್ನೂರಿನಲ್ಲಿ ಮೈಲಾರ ಮಹದೇವಪ್ಪ ರವರ ಹೆಸರಿನಲ್ಲಿ ಸ್ಮಾರಕ ಭವನ ನಿರ್ಮಾಣ ಮಾಡಲು ರೂ.1.60 ಕೋಟಿಗಳನ್ನು ಮೀಸಲಿಟ್ಟಿರುತ್ತಾರೆ. ಇದನ್ನು ಕಾರ್ಯಾನುಷ್ಠಾನಗೊಳಿಸುವ ಬಗ್ಗೆ ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 39 ಸ್ಮಾಪ್ರನಿ 2009, ಬೆಂಗಳೂರು, ದಿನಾಂಕ: 22ನೇ ಆಗಸ್ಟ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಹಾವೇರಿ ಜಿಲ್ಲೆಯ ಬ್ಯಾಡಗಿ ತಾಲ್ಲೂಕಿನ ಮೋಟೆಬೆನ್ನೂರಿನಲ್ಲಿ ಮೈಲಾರ ಮಹದೇವಪ್ಪ ರವರ ಹೆಸರಿನಲ್ಲಿ ಸ್ಮಾರಕ ಭವನ ನಿರ್ಮಾಣ ಮಾಡಲು ಈ ಕೆಳಕಂಡ ಷರತ್ತುಗಳನ್ನು ವಿಧಿಸಿ, ರೂ.1.00 ಕೋಟಿಗಳನ್ನು ಜಿಲ್ಲಾಧಿಕಾರಿಗಳು, ಹಾವೇರಿ ಜಿಲ್ಲೆ, ಹಾವೇರಿ ಇವರಿಗೆ ಬಿಡುಗಡೆ ಮಾಡಲು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರಿಗೆ ಸರ್ಕಾರದ ಮಂಜೂರಾತಿ ನೀಡಲಾಗಿದೆ.

**ಷರತ್ತುಗಳು**

ಅ) ಕಾಮಗಾರಿ ಪ್ರಾರಂಭವಾದ ನಂತರ ಪ್ರಗತಿ ಆಧರಿಸಿ ಹಂತ ಹಂತವಾಗಿ ಅನುದಾನ ಬಿಡುಗಡೆ ಮಾಡುವುದು.

ಆ) ಈ ಕಾಮಗಾರಿಯ ಅಂದಾಜು ವೆಚ್ಚ ರೂ.100.00 ಲಕ್ಷಗಳಿಗೆ ನಿಗದಿಪಡಿಸಿಕೊಳ್ಳುವುದು

ಇ) ಈ ಕಾಮಗಾರಿಗೆ ಅಂದಾಜು ವೆಚ್ಚ ಪಟ್ಟಿ ಹಾಗೂ ನೀಲಿ ನಕ್ಷೆಯನ್ನು ಸರ್ಕಾರಕ್ಕೆ ಕಳುಹಿಸಿ ಆಡಳಿತಾತ್ಮಕ/ತಾಂತ್ರಿಕ ಅನುಮೋದನೆಯನ್ನು ಸಕ್ಷಮ ಪ್ರಾಧಿಕಾರದಿಂದ ಪಡೆಯುವುದು.

ಈ) ಕಾಮಗಾರಿಯನ್ನು ಟೆಂಡರ್ ಕರೆದು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಕಾಯ್ದೆ 1999 ಹಾಗೂ ಅದರ ನಿಯಮಗಳು 2000ರಂತೆ ಕ್ರಮ ಕೈಗೊಳ್ಳತಕ್ಕದ್ದು.

ಉ) ಜಿಲ್ಲಾಧಿಕಾರಿಗಳು ಕಾಮಗಾರಿಯ ಪ್ರಗತಿಯನ್ನು ಪ್ರತಿ ತಿಂಗಳು ಪರಾಮರ್ಶೆ ಮಾಡಿ ಈ ಸಾಲಿನಲ್ಲೇ ಕಾಮಗಾರಿ ಮುಗಿಸಲು ಕ್ರಮ ತೆಗೆದುಕೊಳ್ಳುವುದು ಹಾಗೂ ಸಕ್ಷಮ ಪ್ರಾಧಿಕಾರ ಇದರ ಮುಂದಿನ ನಿರ್ವಹಣೆ ನೋಡಿಕೊಳ್ಳುವುದು.

ಈ ಅನುದಾನವನ್ನು 2009–10ನೇ ಸಾಲಿನ ಲೆಕ್ಕ ಶೀರ್ಷಿಕೆ 2205–00–102–4–31–059 (ಕನ್ನಡ ಮತ್ತು ಸಂಸ್ಕೃತಿಗೆ ಉತ್ತಾಹ) ಇತರೆ ವೆಚ್ಚ ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಸಹಮತಿಯನ್ನು ಟಿಪ್ಪಣಿ ಸಂಖ್ಯೆ: ಆಇ 739 ವೆಚ್ಚ–7 2009, ದಿನಾಂಕ:10.08.2009 ಹಾಗೂ ಯೋಜನಾ ಇಲಾಖೆಯ ಸಹಮತಿಯನ್ನು ಟಿಪ್ಪಣಿ ಸಂಖ್ಯೆ: ಪಿಡಿ 66 ಎಂ&ಇ 2009, ದಿನಾಂಕ: 22.07.2009 ರಲ್ಲಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಕೆ. ಭರ್ಮರಾಜಪ್ಪ**

ಪಿ.ಆರ್. 2024 ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ).

**ವಿಷಯ:** ‘ಇ’ ಆಡಳಿತದಲ್ಲಿ ಐ.ಟಿ. ಕಾನೂನನ್ನು ಪರಿಚಯಿಸುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಇವರ ಪತ್ರ ಸಂಖ್ಯೆ:ಕಸನಿ:/20/ಕಅ/2009–10, ದಿನಾಂಕ: 10.07.2009.

**ಪ್ರಸ್ತಾವನೆ:**

ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆರವರು ಮೇಲೆ ಓದಲಾದ ದಿನಾಂಕ 10.07.2009ರ ಪತ್ರದಲ್ಲಿ ‘ಇ’ ಆಡಳಿತದಲ್ಲಿ ಐ.ಟಿ. ಕಾನೂನನ್ನು ಪರಿಚಯಿಸುವ ಬಗ್ಗೆ ಸರ್ಕಾರಿ ಆದೇಶ ಸಂಖ್ಯೆ ಕಸಂವಾಪ್ರ 64 ಕಸನಿ 2008 ರಲ್ಲಿ ಬಿಡುಗಡೆ ಮಾಡಲಾದ ರೂ.15.00 ಲಕ್ಷಗಳು ಬಿಡುಗಡೆ ಮಾಡಿದ್ದು, ಹಣವನ್ನು ಡ್ರಾ ಮಾಡದೆ ಲ್ಯಾಪ್ಸ್ ಆಗಿರುತ್ತದೆ ಎಂದು ಹಾಗೂ ಈ ಸಾಲಿನ ಕ್ರಿಯಾಯೋಜನೆಯಲ್ಲಿ ರೂ.25.00 ಲಕ್ಷಗಳನ್ನು ‘ಇ’ ಆಡಳಿತದಲ್ಲಿ ಐ.ಟಿ. ಕಾನೂನನ್ನು ಪರಿಚಯಿಸಲು ತರಬೇತಿ ನೀಡುವ ಉದ್ದೇಶದಿಂದ ಹಂಚಿಕೆ ಮಾಡಿಕೊಳ್ಳಲಾಗಿದೆ ಎಂದು ತಿಳಿಸಿದ್ದಾರೆ. ಈ ಯೋಜನೆಯನ್ನು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು, ಕುವೆಂಪು ವಿಶ್ವವಿದ್ಯಾಲಯ, ಐ.ಟಿ. ಕಾನೂನು ಮತ್ತು ಕನ್ನಡ ಗಣಕ ಪರಿಷತ್ತಿನ ಸಹಕಾರದೊಂದಿಗೆ ಈ ಕೆಳಕಂಡ ಯೋಜನೆಗಳನ್ನು ಮಾದರಿ ಯೋಜನೆಯಾಗಿ ಅನುಷ್ಠಾನಗೊಳಿಸಲು ಅನುಕೂಲವಾಗುವಂತೆ ಈ ತರಬೇತಿ ಕಾರ್ಯಕ್ರಮಗಳಿಗೆ ಒಟ್ಟು ರೂ.23.00 ಲಕ್ಷಗಳನ್ನು ಲೆಕ್ಕಶೀರ್ಷಿಕೆ 2205–00–102–4–31–059 (ಯೋಜನೆ) ಅಡಿಯಲ್ಲಿ ಬಿಡುಗಡೆ ಮಾಡಲು ಕೋರಿರುತ್ತಾರೆ.

**ತರಬೇತಿ ಕಾರ್ಯಕ್ರಮದ ವಿವರ**

| ಕ್ರ.ಸಂ. | ‘ಇ’ ಆಡಳಿತ ತರಬೇತಿ ಅವಧಿ | ಒಟ್ಟು (12) ಹನ್ನೆರಡು ದಿನಗಳು |
|---|---|---|
| 1 | ಇ–ಆಡಳಿತ ಇಲಾಖೆಯಿಂದ ನೀಡುವ ತಂತ್ರಜ್ಞಾನ ತರಬೇತಿ ಅವಧಿ | ಒಟ್ಟು (6) ಆರು ದಿನಗಳು |
| 2 | ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಹಾಗೂ ಕುವೆಂಪು ವಿಶ್ವವಿದ್ಯಾನಿಲಯದಿಂದ ನೀಡುವ ತರಬೇತಿ ಅವಧಿ | ಒಟ್ಟು (6) ಆರು ದಿನಗಳು |

| ಕ್ರ.ಸಂ. | 'ಇ' ಆಡಳಿತ ತರಬೇತಿ ಅವಧಿ | ಒಟ್ಟು (12) ಹನ್ನೆರಡು ದಿನಗಳು |
|---|---|---|
| 3 | ಒಂದು ತಂಡಕ್ಕೆ 40 ಅಭ್ಯರ್ಥಿಗಳಂತೆ<br>ತರಬೇತಿಗೆ ತಗಲುವ ವೆಚ್ಚ<br>1*6 ತರಬೇತಿ<br>ಇತರೆ ವೆಚ್ಚಗಳಿಗಾಗಿ | ರೂ. 3,62,800.00<br>ರೂ. 21,76,800.00<br>ರೂ. 1,23,200.00 |
| | **ಒಟ್ಟು** | **ರೂ. 23,00,000.00** |

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸಿದೆ:

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 97 ಕಸನಿ 2009, ಬೆಂಗಳೂರು ದಿನಾಂಕ: 26ನೇ ಆಗಸ್ಟ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ 'ಇ' ಆಡಳಿತದಲ್ಲಿ ಐ.ಟಿ. ಕಾನೂನು ಪರಿಚಯಿಸುವ ಬಗ್ಗೆ ತರಬೇತಿ ನೀಡಲು ರೂ.23.00 ಲಕ್ಷ (ರೂಪಾಯಿ ಇಪ್ಪತ್ತಮೂರು ಲಕ್ಷ) ಗಳನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಕಾಯ್ದೆ 1999 ಹಾಗೂ ಅದರ ನಿಯಮಗಳು 2000ನ್ನು ಅನುಸರಿಸಿ ಬಿಡುಗಡೆ ಮಾಡಲು ನಿರ್ದೇಶಕರು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರಿಗೆ ಸರ್ಕಾರವು ಅನುಮತಿ ನೀಡಿದೆ.

ಇದಕ್ಕೆ ತಗಲುವ ವೆಚ್ಚವನ್ನು 2009–10ನೇ ಸಾಲಿನ ಲೆಕ್ಕಶೀರ್ಷಿಕೆ 2205–00–102–4–31–059 (ಯೋಜನೆ) ಇತರ ಖರ್ಚು ಇದರ ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿಯನ್ನು ಟಿಪ್ಪಣಿ ಸಂಖ್ಯೆ: ಶಿಇ 1844 ಐಎಫ್(ಬಿ&ಎ) 2009, ದಿನಾಂಕ 18.08.2009ರಲ್ಲಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಕೆ. ಭರ್ಮರಾಜಪ್ಪ**

ಪಿ.ಆರ್. 2025 ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ).

**ತಿದ್ದೋಲೆ**

**ಸಂಖ್ಯೆ: ಕಸಂವಾಪ್ರ 73 ಕಸನಿ 2008, ಬೆಂಗಳೂರು, ದಿನಾಂಕ: 22ನೇ ಆಗಸ್ಟ್ 2009**

ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 73 ಕಸನಿ 2008 ದಿನಾಂಕ: 26.06.2009 ರಲ್ಲಿನ ಆದೇಶ ಭಾಗದಲ್ಲಿನ ಮೊದಲನೇ ಕಂಡಿಕೆಯಲ್ಲಿ ನಮೂದಾಗಿರುವ **"ಲೆಕ್ಕಶೀರ್ಷಿಕೆ 2205–00–102–1–46–059ರಡಿ ಭರಿಸತಕ್ಕದ್ದು"**. ಇದನ್ನು ದಿನಾಂಕ: 26.06.2009 ರಿಂದಲೇ ಜಾರಿಗೆ ಬರುವಂತೆ ತೆಗೆದು ಹಾಕಿ **ಅದರ ಬದಲಿಗೆ** ಈ ಕೆಳಕಂಡಂತೆ ವಾಖ್ಯಗಳನ್ನು ಸೇರಿಸಲಾಗಿದೆ. **"ಅನುದಾನದ ಬಿಲ್ಲಿನ ಮೇಲೆ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ರವರ ಮೇಲುರುಜು ಪಡೆದು ಡ್ರಾ ಮಾಡಲು ಆಡಳಿತಾಧಿಕಾರಿಗಳು, ಕನ್ನಡ ಪುಸ್ತಕ ಪ್ರಾಧಿಕಾರ ಇವರಿಗೆ ಅನುಮೋದನೆ ನೀಡಲಾಗಿದೆ ಹಾಗೂ ಈ ವೆಚ್ಚವನ್ನು ಲೆಕ್ಕಶೀರ್ಷಿಕೆ 2205–00–102–1–46–059 (ಯೋಜನೆ)ಯಡಿ ಭರಿಸತಕ್ಕದ್ದು"** ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಕೆ. ಭರ್ಮರಾಜಪ್ಪ**

ಪಿ.ಆರ್. 2026 ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ).

**ವಿಷಯ:** ಗದಗ ಜಿಲ್ಲಾ ಸಂಕೀರ್ಣ ಕಟ್ಟಡದಲ್ಲಿ ಇಲಾಖೆಯ ಹೊಸ ಕಚೇರಿ ಪ್ರಾರಂಭಿಸಲು ಧನಸಹಾಯ ಬಿಡುಗಡೆ ಕುರಿತು.

**ಓದಲಾಗಿದೆ:** ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರ ಪತ್ರ ಸಂಖ್ಯೆ: ಕಸನಿ/58 ದಾಸ್ತಾನು/2008–09 ದಿನಾಂಕ 19.05.2009 ಮತ್ತು 07.07.2009.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ 19.05.2009 ಹಾಗೂ 07.07.2009ರ ಪತ್ರಗಳಲ್ಲಿ ಗದಗ ಜಿಲ್ಲಾ ಸಂಕೀರ್ಣ ಕಟ್ಟಡದಲ್ಲಿ ಇಲಾಖೆಯ ಹೊಸ ಕಚೇರಿ ಪ್ರಾರಂಭಿಸಲು ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಗದಗ ಜಿಲ್ಲೆ ಇವರಿಗೆ 553.50 ಚದರ ಅಡಿ ವಿಸ್ತೀರ್ಣದ ಕೊಠಡಿಯನ್ನು ನೀಡಿದ್ದು, ಇಲ್ಲಿ ಹೊಸದಾಗಿ ಪುಸ್ತಕ ದಾಸ್ತಾನು ಕ್ಯಾಬಿನ್, ಪ್ರದರ್ಶನ ಫಲಕ, ಅಧಿಕಾರಿಗಳ ಕೊಠಡಿ ಪಾರ್ಟೀಶನ್, ಕಂಪ್ಯೂಟರ್ ಕ್ಯಾಬಿನ್ ಮತ್ತು ಟೇಬಲ್, ಕುರ್ಚಿಯ ವ್ಯವಸ್ಥೆ, ಕಿಟಕಿಗಳಿಗೆ ಕರ್ಟನ್ ಹಾಕುವುದು, ಅಲ್ಲದೆ ಹೊಸ ಕಚೇರಿಯ ಆಧುನೀಕರಣಕ್ಕಾಗಿ ಮತ್ತು ಪಿಠೋಪಕರಣಗಳ ಖರೀದಿಗಾಗಿ ಒಟ್ಟು ರೂ.2,30,000/–

ಅವಶ್ಯಕವಾಗಿ ಬೇಕಾಗಿರುತ್ತದೆ. ಈ ಕಚೇರಿಯನ್ನು ಒಟ್ಟಾರೆ ಸುಸಜ್ಜೀಕರಣಗೊಳಿಸಲು ರೂ.3,75,000/– ಗಳನ್ನು ನಿಗದಿಪಡಿಸಿದ್ದ ಮೊತ್ತವನ್ನು ರೂ.2,30,000/– ಗಳಿಗೆ ಮಾತ್ರ ಸೀಮಿತಗೊಳಿಸಿ, ಸದರಿ ಮೊತ್ತವನ್ನು ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಗದಗ ಇವರಿಗೆ ಬಿಡುಗಡೆ ಮಾಡುವಂತೆ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರು ಕೋರಿರುತ್ತಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 55 ಕಸನಿ 2009, ಬೆಂಗಳೂರು, ದಿನಾಂಕ: 25ನೇ ಆಗಸ್ಟ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಗದಗ ಜಿಲ್ಲಾ ಸಂಕೀರ್ಣ ಕಟ್ಟಡದಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಹೊಸ ಕಚೇರಿ ಪ್ರಾರಂಭಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಕಾಯ್ದೆ 1999 ಹಾಗೂ ಅದರ ನಿಯಮಗಳು 2000 ರನ್ವಯ ರೂ.2,30,000/– (ರೂಪಾಯಿ ಎರಡು ಲಕ್ಷ ಮೂವತ್ತು ಸಾವಿರ) ಗಳನ್ನು ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಗದಗ ಇವರಿಗೆ ಬಿಡುಗಡೆ ಮಾಡಲು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರಿಗೆ ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಅನುದಾನವನ್ನು 2009–10ನೇ ಸಾಲಿನ ಲೆಕ್ಕ ಶೀರ್ಷಿಕೆ 2205–00–001–0–01–059 (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿಯನ್ನು ಟಿಪ್ಪಣಿ ಸಂಖ್ಯೆ: ಶಿಇ 2019 ಐಎಫ್(ಬಿ&ಎ) 2009, ದಿನಾಂಕ 18.08.2009ರಲ್ಲಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ಭರ್ಮರಾಜಪ್ಪ**

ಪಿ.ಆರ್. 2027 ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

## FOREST, ECOLOGY AND ENVIRONMENT SECRETARIAT

## NOTIFICATION

**No: FEE 16 FWL 2008, Bangalore, dated: 21st August 2009**

Whereas the Government of Karnataka in exercise of the powers conferred by sub-section (1) of Section 35 of Wildlife Protection Act 1972 (Central Act 55 of 1972) has declared the area the situation and limits of which are specified in the schedule to Government Notification No. FEE 221 FWL 99, dated 18.08.2003 to the extent of 339.866 sq km as “Anshi National Park” for the protection, propagation and development of flora and fauna and wildlife significance of the area.

And whereas the Government of Karnataka considers it necessary to alter the limits and boundaries of the said National Park in view of the following aspects.

1. Ecological importance of the area, the environmental clearance given by the Government of India (No. 3/24/78 HCT/ENV, dt. 16.08.1979) for Kalinadi stage – II Hydro Electric Project, clearly states that, ‘ the boundary of the existing Wildlife Sanctuary at Dandeli should be expanded to cover the reservoirs created by Kalinadi Stage I and Stage II projects’. The reservoir created by Kalinadi Stage I is the Supa reservoir and those under Stage II are the Kodsalli and Kadra backwaters of river Kali. The proposed additional area falls under this clause and is sandwiched between Anshi NP and the Kali River, and situated in steep slope.
2. The area is ecologically fragile due to its steep slope and is with only one village.
3. With this the river Kali becomes the boundary of the National Park there by giving natural protection to the forests and the wildlife.
4. This area is quite unique from wildlife point of view. This area is rich in Tigers, Leopards, Gaur, Mouse Deer, Barking Deer, Sambar Deer, etc. Known for reptiles like Python, King Cobra, Vipers, etc. Home for innumerable birds and other flora.
5. Acts as a critical wildlife corridor connecting to the protected areas of Goa state and also the perennial water source i.e., Kali River.

And whereas the Government of Karnataka under its letter No: FEE 58 FWL 2005, dated: 16.05.2006 has finally taken decision to extend the boundary of Anshi National Park comprises of Reserved Forests only.

And whereas all the rights in respect of the Reserved Forests to be constituted as Anshi National Park are already vested with the State Government.

The extended Anshi National Park does not include any of the Revenue Villages, Patta Lands, Revenue Lands, Hakkal and Betta lands on the date of publication of this notification. The various rights as notified in the Village Forest Records statements of the respective reserve forests will continue.

| **Sl. No.** | **District** | **Taluk** | **Reserve Forest in Hectares** |
|---|---|---|---|
| 1. | Uttara Kannada | Joida | 1373.49 |
| 2. | ” | Karwar | 6374.74 |
| | **Total** | | 7748.23 |

The detailed description of the Reserve Forests constituting the National Park is as contained in the enclosed Annexure II.

Now therefore, in exercise of the powers conferred by section 35 of the Wildlife Protection Act 1972 (Central Act 53 of 1972), the Government of Karnataka hereby declares that the area specified in the schedule shall be comprised within the Anshi National Park and the said area shall be National Park called “Anshi National Park” with effect from the date of publication of this notification.

**Schedule**

Name of the District : Uttara Kannada
Taluk/s : Joida and Karwar
Area : 7748.23 Ha
77.4823 sq km
(Excluding the Revenue Villages, Patta Lands, Revenue lands, Hakkal and Betta land on the date of publication of this notification)

**Annexure I**

**Boundary Description**

The boundary of the proposed additional forest area to be included in Anshi National Park, starts at the point at northeast side where Vakinala joins Kali River which is also South-East side of Anshi National Park and South – West side of Dandeli Wildlife Sanctuary at Suligeri and runs towards West all along the Kali River until it reaches Sakalihalla at South-West side. Then it traverses along North side all along the Sakalihalla and reaches the existing Anshi National Park boundary in North-West side, then runs towards East along the existing Anshi National Park boundary till it reaches the starting point.

By order and in the name of the Governor of Karnataka,

**P.R. KALAVATHI**

Under Secretary to Government,

Forest, Ecology & Environment Department.

**Annexure (II) - TO GOVERNMENT NOTIFICATION**

| **Sl. No.** | **District** | **Taluka & Range** | **Village** | **Survey No.** | **Extent in Ha.** |
|---|---|---|---|---|---|
| 1 | Uttar Kannada | Joida | Birkol | 1 | 258.10 |
| | | | | 2 | 281.64 |
| | | | | 3 | 298.69 |

| Sl. No. | District | Taluka & Range | Village | Survey No. | Extent in Ha. |
|---|---|---|---|---|---|
| | | | | 4 | 283.82 |
| | | | | 5 | 249.02 |
| | | | | 15 | 2.21 |
| | | | | **Total:** | **1373.49** |
| 2 | Uttar Kannada | Karwar | Balemane | 1 | 137.67 |
| | | | | 2 | 109.43 |
| | | | | 3 | 133.36 |
| | | | | 4 | 143.62 |
| | | | | 5 | 137.46 |
| | | | | 6 | 108.67 |
| | | | | 7 | 139.68 |
| | | | | 14A | 158.12 |
| | | | | 16 | 120.06 |
| | | | | 17 | 204.08 |
| | | | | 18 | 119.96 |
| | | | | 19 | 152.90 |
| | | | | 20 | 118.74 |
| | | | | 35 | 137.21 |
| | | | | 37 | 130.61 |
| | | | | 38 | 154.02 |
| | | | | 39 | 111.86 |
| | | | | 40 | 151.60 |
| | | | | 41 | 95.33 |
| | | | | 42 | 108.02 |
| | | | | 43 | 148.53 |
| | | | | 44 | 174.42 |
| | | | | 45 | 124.86 |
| | | | | 46 | 147.67 |
| | | | | 21 | 0.88 |
| | | | | 22 | 0.20 |
| | | | | 47 | 2.71 |
| | | | | **Total:** | **3271.66** |
| 3 | Uttar Kannada | Karwar | Kadra | 1A | 87.82 |
| | | | | 14 | 134.19 |
| | | | | 24 | 144.52 |
| | | | | 25 | 167.02 |
| | | | | 26 | 179.89 |

| Sl. No. | District | Taluka & Range | Village | Survey No. | Extent in Ha. |
|---|---|---|---|---|---|
| | | | | 30 | 115.34 |
| | | | | 31 | 88.22 |
| | | | | 32 | 41.43 |
| | | | | 33 | 139.24 |
| | | | | 34 | 158.97 |
| | | | | 35 | 126.58 |
| | Uttar Kannada | Karwar | Kadra | 36 | 110.65 |
| | | | | 37 | 152.51 |
| | | | | 38 | 186.78 |
| | | | | 39 | 202.68 |
| | | | | 40 | 131.53 |
| | | | | 41 | 81.18 |
| | | | | 42 | 73.70 |
| | | | | 43 | 3.01 |
| | | | | 59A1 | 113.74 |
| | | | | 62 | 108.06 |
| | | | | 63 | 112.18 |
| | | | | 67 | 169.18 |
| | | | | 68 | 122.23 |
| | | | | 71A1A1 | 127.31 |
| | | | | 13 | 1.79 |
| | | | | 60 | 1.48 |
| | | | | 61 | 6.51 |
| | | | | 64 | 6.40 |
| | | | | 65 | 4.96 |
| | | | | 66 | 1.34 |
| | | | | 69 | 2.62 |
| | | | | **Total:** | **3103.08** |
| | | | | **Grand Total:** | **7748.23** |

**P.R. KALAVATHI**
Under Secretary to Government,
Forest, Ecology & Environment Department.

P.R. 2028

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಶ್ರೀ ಸಿ.ವಿ. ಪ್ರಹ್ಲಾದಾಚಾರ್, ಉಪ ನಿರ್ದೇಶಕರು (ಖಾಗ್ರಾ) ಜಿಲ್ಲಾ ಪಂಚಾಯತ್, ಬೆಂಗಳೂರು ನಗರ ಹಾಗೂ ಶ್ರೀ ಇಂದುಶೇಖರ್, ಜೇನುಕೃಷಿ ಸಂಘಟಿಕರು, ಜಿಲ್ಲಾ ಪಂಚಾಯತ್, ಬೆಂಗಳೂರು ನಗರ, ಇವರುಗಳು ಎಸಗಿರುವರೆನ್ನಲಾದ ಆರೋಪಗಳ ಕುರಿತು ಇಲಾಖಾ ವಿಚಾರಣೆ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1) ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಬೆಂಗಳೂರು ನಗರ ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ: ಜಿಪಂ:ಲೆಕ್ಕ–1 (ಖಾಗ್ರಾ) 33/2003 ದಿ: 06.09.2003, 13.10.2003 ಮತ್ತು 09.07.2004.

2) ಕೈಗಾರಿಕಾಭಿವೃದ್ಧಿ ಆಯುಕ್ತರ ಅರೆ ಸರ್ಕಾರಿ ಪತ್ರ ಸಂಖ್ಯೆ: ಕೈವಾಇ/ ನಿರೀ–2: ಬೆಂನ:ಶಿ:ಕ್ರ–18/ 2003–04 ದಿ: 14.11.2003, ದಿ: 29.06.2004 ಹಾಗೂ ದಿ: 03.08.2004.

3) ಸರ್ಕಾರಿ ಆದೇಶ ಸಂಖ್ಯೆ: ವಾಕೈ 178 ಕೈಸೇವಿ 2003, ದಿ: 12.08.2004.

4) ಸರ್ಕಾರಿ ಆದೇಶ ಸಂಖ್ಯೆ: ವಾಕೈ 178 ಕೈಸೇವಿ 2003, ದಿ: 20.11.2004.

5) ಸರ್ಕಾರದ ಕಾರಣ ಕೇಳುವ ನೋಟೀಸು ದಿ: 27.12.2004.

6) ಕಾರಣ ಕೇಳುವ ನೋಟೀಸಿಗೆ ಅಧಿಕಾರಿ/ ನೌಕರರ ಹೇಳಿಕೆ ದಿ: 02.03.2005 ಹಾಗೂ ದಿ: 21.03.2005.

7) ಸರ್ಕಾರಿ ಆದೇಶ ಸಂಖ್ಯೆ: ವಾಕೈ 305 ಕೈಸೇವಿ 2005, ದಿ: 21.03.2006.

8) ಇಲಾಖಾ ವಿಚಾರಣಾ ವರದಿ ದಿ: 30.04.2009.

9) ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ 10 ಸೇಇವಿ 2003 ದಿ: 12.11.2003.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಪತ್ರದಲ್ಲಿ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್, (ನಗರ) ಬೆಂಗಳೂರು ರವರು ಹಾಗೂ ಮೇಲೆ ಓದಲಾದ (2) ರ ಪತ್ರದಲ್ಲಿ ಕೈಗಾರಿಕಾಭಿವೃದ್ಧಿ ಆಯುಕ್ತರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ರವರು ಸರ್ಕಾರಕ್ಕೆ ಬರೆದಿರುವ ಪತ್ರಗಳಲ್ಲಿ ಬಹು ಮುಖ್ಯವಾಗಿ ಶ್ರೀ ಸಿ.ವಿ. ಪ್ರಹ್ಲಾದಾಚಾರ್, ಉಪ ನಿರ್ದೇಶಕರು (ಖಾಗ್ರಾ) ಜಿಲ್ಲಾ ಪಂಚಾಯತ್, ಬೆಂಗಳೂರು ನಗರ ರವರು 2002–03ನೇ ಸಾಲಿನಲ್ಲಿ ಕೇಂದ್ರ ಪುರಸ್ಕೃತ ಯೋಜನೆಯ ವಿಶೇಷ ಘಟಕ ಯೋಜನೆಯಡಿ ಲೆಕ್ಕಶೀರ್ಷಿಕೆ 2225–01–793–0–01 (ಯೋಜನೆ) ಅಡಿಯಲ್ಲಿ ಅನುದಾನ ಬಿಡುಗಡೆಯಾಗದಿದ್ದರೂ ತರಬೇತಿ ವೆಚ್ಚ ಭರಿಸಲು ಆರ್ಥಿಕ ಸಂಹಿತೆಯನ್ನು ಉಲ್ಲಂಘನೆ ಮಾಡಿ ರೂ. 6.00 ಲಕ್ಷಗಳನ್ನು ಖಜಾನೆಯಿಂದ ಡ್ರಾ ಮಾಡಲು ಇವರು ಕಛೇರಿ ಆದೇಶವನ್ನು ನೀಡಿರುತ್ತಾರೆ ಹಾಗೂ ಎಲ್ಲಾ ಬಿಲ್ಲುಗಳ ಮೇಲೆ ಸಹಿ ಮಾಡಿರುತ್ತಾರೆ ಹಾಗೂ ಶ್ರೀ ಇಂದುಶೇಖರ್, ಜೇನುಕೃಷಿ ಸಂಘಟಕರು, ರವರು ಈ ಬಿಲ್ಲುಗಳ ಮೇಲೆ ಹಣ ಡ್ರಾ ಮಾಡಿರುತ್ತಾರೆಂದು ತಿಳಿಸುತ್ತಾ ಇವರಿಬ್ಬರು ಈ ಪ್ರಕರಣದಲ್ಲಿ ಸರ್ಕಾರದ ಹಣ ದುರುಪಯೋಗಪಡಿಸಿಕೊಂಡಿರುವುದರಿಂದ ಇವರುಗಳ ವಿರುದ್ಧ ಜಂಟಿ ವಿಚಾರಣೆ ಮಾಡಲು ಹಾಗೂ ಜಂಟಿ ವಿಚಾರಣೆ ಕಾಯ್ದಿರಿಸಿ ಕೆ.ಸಿ.ಎಸ್ (ಸಿಸಿಎ) ನಿಯಮಾವಳಿ 1957ರ ನಿಯಮ 10 (1) (a) ರನ್ವಯ ತಕ್ಷಣದಿಂದ ಜಾರಿಗೆ ಬರುವಂತೆ ಇವರನ್ನು ಅಮಾನತ್ತಿನಲ್ಲಿರಿಸಲು ಶಿಫಾರಸ್ಸಿನೊಂದಿಗೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದ್ದಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಸರ್ಕಾರದ ಆದೇಶದಲ್ಲಿ ಶ್ರೀ ಸಿ.ವಿ. ಪ್ರಹ್ಲಾದಾಚಾರ್, ಉಪ ನಿರ್ದೇಶಕರು, ಇವರು 2002–03ನೇ ಸಾಲಿನಲ್ಲಿ ಕೇಂದ್ರ ಪುರಸ್ಕೃತ ವಿಶೇಷ ಘಟಕ ಯೋಜನೆಯಡಿ ಅನುದಾನ ಬಿಡುಗಡೆಯಾಗದಿದ್ದರೂ ರೂ. 6.00 ಲಕ್ಷಗಳನ್ನು ಡ್ರಾ ಮಾಡಲು ಕಛೇರಿ ಆದೇಶ ನೀಡಿ ಎಲ್ಲಾ ಬಿಲ್ಲುಗಳಿಗೆ ಮೇಲು ಸಹಿ ಮಾಡಿರುವುದರಿಂದ ಹಾಗೂ ಶ್ರೀ ಇಂದುಶೇಖರ್, ಜೇನುಕೃಷಿ ಸಂಘಟಕರು, ರವರು ಈ ಬಿಲ್ಲುಗಳನ್ನು ಡ್ರಾ ಮಾಡಿ ಅಕ್ರಮ ಎಸಗಿರುವುದು ಮೇಲ್ನೋಟಕ್ಕೆ ಸತ್ಯಾಂಶದಿಂದ ಕೂಡಿರುವುದರಿಂದ ಇವರುಗಳ ವಿರುದ್ಧ ಇಲಾಖಾ ವಿಚಾರಣೆ/ ಕ್ರಿಮಿನಲ್ ಮೊಕದ್ದಮೆಯನ್ನು ಕಾಯ್ದಿರಿಸಿ ಶ್ರೀ ಸಿ.ವಿ. ಪ್ರಹ್ಲಾದಾಚಾರ್, ಉಪ ನಿರ್ದೇಶಕರು ಹಾಗೂ ಶ್ರೀ ಇಂದುಶೇಖರ್, ಜೇನುಕೃಷಿ ಸಂಘಟಕರು, ಇವರುಗಳನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957 ರ ನಿಯಮ 10 (1) (ಡಿ) ರನ್ವಯ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4) ರ ಸರ್ಕಾರಿ ಆದೇಶದಲ್ಲಿ ಶ್ರೀ ಸಿ.ವಿ. ಪ್ರಹ್ಲಾದಾಚಾರ್, ಉಪ ನಿರ್ದೇಶಕರು ಹಾಗೂ ಶ್ರೀ ಇಂದುಶೇಖರ್, ಜೇನುಕೃಷಿ ಸಂಘಟಕರು, ಇವರುಗಳ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957 ರ ನಿಯಮ 10ರ ಉಪ ನಿಯಮ 5 (ಸಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಇವರುಗಳ ವಿರುದ್ಧದ ಆರೋಪಗಳ ಬಗ್ಗೆ ಕ್ರಿಮಿನಲ್ ಮೊಕದ್ದಮೆ ಹೂಡುವುದನ್ನು ಕೈಬಿಟ್ಟು ಹಾಗೂ ಸದರಿ ಪ್ರಕರಣದಲ್ಲಿ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ಇವರುಗಳ ಅಮಾನತ್ತನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಗೊಳಿಸಿ ಸೇವೆಗೆ ಪುನರ್ ಸ್ಥಾಪಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (5) ರಲ್ಲಿ ಶ್ರೀ ಸಿ.ವಿ. ಪ್ರಹ್ಲಾದಾಚಾರ್, ಉಪ ನಿರ್ದೇಶಕರು ಹಾಗೂ ಶ್ರೀ ಇಂದುಶೇಖರ್, ಜೇನುಕೃಷಿ ಸಂಘಟಕರು, ಇವರುಗಳು ಎಸಗಿರುವ ಆರೋಪಗಳ ಬಗ್ಗೆ ಕೆ.ಸಿ.ಎಸ್ (ಸಿಸಿಎ) ನಿಯಮಾವಳಿ 1957 ರ ನಿಯಮ 11 ರಡಿ ಇಲಾಖಾ ವಿಚಾರಣೆ ನಡೆಸಲು ಉದ್ದೇಶಿಸಿ ಕಾರಣ ಕೇಳುವ ನೋಟೀಸ್‌ನೊಂದಿಗೆ ದೋಷಾರೋಪಣಾ ಪಟ್ಟಿ ಮತ್ತಿತರ ಅನುಬಂಧಗಳನ್ನು ದಿ: 27.12.2004 ರಂದು ಜಾರಿಗೊಳಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (6) ರಲ್ಲಿ ಕಾರಣ ಕೇಳುವ ನೋಟೀಸ್‌ಗೆ ಶ್ರೀ ಸಿ.ವಿ. ಪ್ರಹ್ಲಾದಾಚಾರ್, ಉಪ ನಿರ್ದೇಶಕರು ಇವರು ಲಿಖಿತ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿ 2002–03ನೇ ಸಾಲಿನಲ್ಲಿ ಕೇಂದ್ರ ಪುರಸ್ಕೃತ ಯೋಜನೆಯ

ವಿಶೇಷ ಘಟಕ ಯೋಜನೆಯಡಿ ರೂ. 6.00 ಲಕ್ಷಗಳನ್ನು ದುರುಪಯೋಗ ಪಡಿಸಿಕೊಂಡು ಕರ್ತವ್ಯ ಲೋಪ ಎಸಗಿರುವುದಿಲ್ಲ ಮೇಲಾಗಿ ಯೋಜನೆಯನ್ನು ಯಶಸ್ಸುಗೊಳಿಸಿರುವುದಾಗಿ ತಿಳಿಸಿ ಹೇಳಿಕೆ ನೀಡಿ ಆರೋಪಗಳಿಂದ ಮುಕ್ತಗೊಳಿಸುವಂತೆ ಕೋರಿದ್ದಾರೆ ಹಾಗೂ ಶ್ರೀ ಇಂದುಶೇಖರ್, ಜೇನುಕೃಷಿ ಸಂಘಟಕರು, ಇವರು ಲಿಖಿತ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿ ತನ್ನ ಮೇಲೆ ಹೊರಿಸಿರುವ ಆರೋಪಗಳನ್ನು ಕೈಬಿಟ್ಟು ಆರೋಪ ಮುಕ್ತಗೊಳಿಸುವಂತೆ ಕೋರಿದ್ದಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (7) ರ ಸರ್ಕಾರಿ ಆದೇಶದಲ್ಲಿ ಶ್ರೀ ಸಿ.ವಿ. ಪ್ರಹ್ಲಾದಾಚಾರ್, ಉಪ ನಿರ್ದೇಶಕರು ಹಾಗೂ ಶ್ರೀ ಇಂದುಶೇಖರ್, ಜೇನುಕೃಷಿ ಸಂಘಟಕರು, ಇವರುಗಳು ಈ ಹಿಂದೆ (ಖಾಗ್ರಾ) ಜಿಲ್ಲಾ ಪಂಚಾಯತ್, ಬೆಂಗಳೂರು ನಗರ ಕಛೇರಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಎಸಗಿದ್ದರೆನ್ನಲಾದ ಆರೋಪಗಳಿಗೆ ಸಂಬಂಧಿಸಿದಂತೆ ಅವರುಗಳ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957 ರ ನಿಯಮ 11 ರಡಿ ಜಂಟಿ ಇಲಾಖಾ ವಿಚಾರಣೆ ನಡೆಸಲು ಈ ಪ್ರಕರಣದಲ್ಲಿ ನಿವೃತ್ತ ನ್ಯಾಯಾಧೀಶರಾದ ಶ್ರೀ ಬಿ.ಎಲ್. ಶ್ರೀಕಂಠಯ್ಯ ಹಾಗೂ ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಉಪ ನಿರ್ದೇಶಕರು, (ಆಡಳಿತ) ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಇಲಾಖಾ ವಿಚಾರಣೆ ನಡೆಸಲು ಸರ್ಕಾರದ ಆದೇಶವನ್ನು ಹೊರಡಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (8) ರ ವಿಚಾರಣಾ ವರದಿಯಲ್ಲಿ ಶ್ರೀ ಬಿ.ಎಲ್. ಶ್ರೀಕಂಠಯ್ಯ ನಿವೃತ್ತ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಗಳು, ಸದರಿ ಪ್ರಕರಣದ ವಿಚಾರಣಾ ವರದಿಯನ್ನು ದಾಖಲಾತಿಗಳೊಂದಿಗೆ ಸರ್ಕಾರಕ್ಕೆ ಕಳುಹಿಸಿ ವಿಚಾರಣಾ ವರದಿಯಲ್ಲಿ ವಿಚಾರಣಾಧಿಕಾರಿಗಳು ಒಂದನೇ ಆರೋಪಿತ ಅಧಿಕಾರಿಯಾದ ಶ್ರೀ ಸಿ.ವಿ. ಪ್ರಹ್ಲಾದಾಚಾರ್, ಉಪ ನಿರ್ದೇಶಕರು (ಖಾಗ್ರಾ) ಜಿಲ್ಲಾ ಪಂಚಾಯತ್, ಬೆಂಗಳೂರು ನಗರ ರವರು ಎಸಗಿರುವ ಆರೋಪಗಳ ಬಗ್ಗೆ ವಿಚಾರಣೆ ಪ್ರಕ್ರಿಯೆ ಪ್ರಗತಿಯಲ್ಲಿದ್ದ ಅವಧಿಯಲ್ಲಿ ಇವರು ದಿ: 29.08.2007 ರಂದು ಮೃತಪಟ್ಟಿರುವುದಾಗಿ ದಿ: 08.10.2007 ರ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ಪತ್ರದ ಮೂಲಕ ವರದಿ ಮಾಡಿರುವುದರಿಂದ ಇವರ ಮೇಲಿನ ಪ್ರಕರಣವು Abate ಆಗಿರುತ್ತದೆ. ಆದುದರಿಂದ, ಒಂದನೇ ಆಪಾದಿತರ ಮೇಲೆ ಮಾಡಿರುವ ಆರೋಪವನ್ನು ಪರಿಗಣಿಸಲು ಅಗತ್ಯವಿರುವುದಿಲ್ಲವೆಂದು ಸರ್ಕಾರಕ್ಕೆ ವರದಿ ಮಾಡಿದ್ದಾರೆ. ಶ್ರೀ ಇಂದುಶೇಖರ್, ಜೇನುಕೃಷಿ ಸಂಘಟಕರು, (ಖಾಗ್ರಾ) ಜಿಲ್ಲಾ ಪಂಚಾಯತ್, ಬೆಂಗಳೂರು ನಗರ ರವರು ಎಸಗಿರುವ ಆರೋಪಗಳ ಬಗ್ಗೆ ವಿಚಾರಣಾಧಿಕಾರಿಗಳು ಆರೋಪಿತರ ವಿರುದ್ಧ ಮಾಡಿರುವ ಆರೋಪವು ರುಜುವಾತಾಗಿರುವುದಿಲ್ಲವೆಂದು ಆರೋಪಿತರು ನಿರ್ದೋಷಿಯೆಂದು ವಿಚಾರಣಾ ವರದಿಯಲ್ಲಿ ಘೋಷಿಸಿದ್ದಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (9) ರಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957 ರ ಅಡಿಯಲ್ಲಿ ಇಲಾಖಾ ವಿಚಾರಣೆ ನಡೆಯುತ್ತಿದ್ದಾಗ ಸರ್ಕಾರಿ ನೌಕರನು ಮೃತನಾದಾಗ ಇಲಾಖಾ ವಿಚಾರಣೆಯ ಮುಂದಿನ ಕ್ರಮದ ಬಗ್ಗೆ ಸ್ಪಷ್ಟವಾಗಿ ಮಾರ್ಗದರ್ಶನ ನೀಡಿರುತ್ತದೆ.

ಅದರಂತೆ, ವಿಚಾರಣಾ ವರದಿಯನ್ನು ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಅಂತಿಮ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 305 ಕೈಸೇವಿ 2005. ಬೆಂಗಳೂರು, ದಿನಾಂಕ: 25ನೇ ಆಗಸ್ಟ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ದಿವಂಗತ ಶ್ರೀ ಸಿ.ವಿ. ಪ್ರಹ್ಲಾದಾಚಾರ್, ಉಪ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಹಿಂದೆ ಉಪ ನಿರ್ದೇಶಕರು, (ಖಾಗ್ರಾ) ಜಿಲ್ಲಾ ಪಂಚಾಯತ್, ಬೆಂಗಳೂರು ನಗರ ಹಾಗೂ ಶ್ರೀ ಇಂದುಶೇಖರ್, ಜೇನುಕೃಷಿ ಸಂಘಟಕರು, (ಖಾಗ್ರಾ) ಜಿಲ್ಲಾ ಪಂಚಾಯತ್, ಬೆಂಗಳೂರು ನಗರ ಇವರುಗಳು ಎಸಗಿರುವರೆನ್ನಲಾದ ಆರೋಪಗಳ ವಿರುದ್ಧ ನಿಯಮಾವಳಿಯನುಸಾರ ಇಲಾಖಾ ವಿಚಾರಣೆ ನಡೆಸಿ ಹಾಗೂ ಇಲಾಖಾ ವಿಚಾರಣಾ ವರದಿಯಲ್ಲಿನ ಶಿಫಾರಸ್ಸುಗಳನ್ನು ಒಪ್ಪಿ ಶ್ರೀ ಸಿ.ವಿ. ಪ್ರಹ್ಲಾದಾಚಾರ್, ದೈವಾಧೀನರಾದ್ದರಿಂದ ಅವರ ಮೇಲಿನ ವಿಚಾರಣೆಯನ್ನು Abate ಎಂದು ಪರಿಗಣಿಸಿ ಸ್ಥಗಿತಗೊಳಿಸಿದೆ ಹಾಗೂ ಶ್ರೀ ಇಂದುಶೇಖರ್, ಜೇನುಕೃಷಿ ಸಂಘಟಕರು, (ಖಾಗ್ರಾ) ಜಿಲ್ಲಾ ಪಂಚಾಯತ್, ಬೆಂಗಳೂರು ನಗರ ಇವರ ವಿರುದ್ಧ ಆರೋಪಗಳು ರುಜುವಾತು (ಸಾಬೀತು) ಆಗಿರುವುದಿಲ್ಲವೆಂದು ವಿಚಾರಣಾ ವರದಿಯಲ್ಲಿ ತಿಳಿಸಿರುವುದರಿಂದ ಕಾರ್ಯ ನಿರ್ವಹಣೆಯಲ್ಲಿ ಇನ್ನೂ ಜಾಗರೂಕತೆಯನ್ನು ವಹಿಸಬೇಕಿತ್ತಾದ್ದರಿಂದ, ಇವರಿಗೆ ವಾಗ್ದಂಡನೆಯನ್ನು ವಿಧಿಸಿ ಆದೇಶ ಹೊರಡಿಸಿದೆ. ವಾಗ್ದಂಡನೆಯನ್ನು ವಿಧಿಸಿದ ಬಗ್ಗೆ ಅವರ ಸೇವಾ ಪುಸ್ತಕದಲ್ಲಿ ನಮೂದಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಸಿ. ಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, (ಸೇವೆಗಳು)

ಪಿ.ಆರ್. 2032

**ವಸತಿ ಸಚಿವಾಲಯ**

**ವಿಷಯ:** ಇಂದಿರಾ ಆವಾಸ್ ಯೋಜನೆಯಡಿ ಮನೆಗಳ ನಿರ್ಮಾಣದ ಘಟಕ ವೆಚ್ಚವನ್ನು 35,000/– ರೂ.ಗಳಿಂದ 40,000/– ರೂ.ಗಳಿಗೆ ಸಹಾಯಧನವನ್ನಾಗಿ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:** 1. ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮದ ಪತ್ರ ಸಂ. ಪಿಐ ಆರ್‌ಜಿಆರ್‌ಹೆಚ್‌ಸಿಎಲ್/02/ಐಎವೈ/05/2009 ದಿನಾಂಕ 20.04.2009.

2. ಆರ್ಥಿಕ ಇಲಾಖೆಯ ಟಿಪ್ಪಣಿ ಸಂ. ಆಇ/407/ವೆಚ್ಚ–9/2009 ದಿನಾಂಕ 10.07.2009.

**ಪ್ರಸ್ತಾವನೆ:**

ವಸತಿ ಇಲಾಖೆಯ ವತಿಯಿಂದ ರಾಜ್ಯದಲ್ಲಿ ಕೈಗೊಂಡ ಗ್ರಾಮೀಣ ಆಶ್ರಯ ಮತ್ತು ಗ್ರಾಮೀಣ ಅಂಬೇಡ್ಕರ್ ಯೋಜನೆಗಳಡಿಯಲ್ಲಿ ಮನೆಗಳ ನಿರ್ಮಾಣದ ಘಟಕ ವೆಚ್ಚವು 40,000/– ರೂ.ಗಳಾಗಿರುತ್ತದೆ. ಇಂದಿರಾ ಆವಾಸ್ ಯೋಜನೆಯ ನಿರ್ವಹಣೆಗಾಗಿ, ಕೇಂದ್ರ ಸರ್ಕಾರವು ಪ್ರತಿಶತ 75ರಷ್ಟು ಅನುದಾನ ನೀಡುತ್ತಿದ್ದು ಉಳಿದ ಪ್ರತಿಶತ 25ರಷ್ಟು ಅನುದಾನವನ್ನು ರಾಜ್ಯ ಸರ್ಕಾರ ಭರಿಸುತ್ತಿದೆ. ಈ ಯೋಜನೆಯಡಿಯಲ್ಲಿ 2008–09ನೇ ಸಾಲಿನಿಂದ ಘಟಕ ವೆಚ್ಚವು 35,000/– ರೂ.ಗಳಾಗಿರುತ್ತದೆ. ಗ್ರಾಮೀಣ ಆಶ್ರಯ ಮತ್ತು ಗ್ರಾಮೀಣ ಅಂಬೇಡ್ಕರ್ ಯೋಜನೆಗಳಲ್ಲಿ ಘಟಕ ವೆಚ್ಚವು 40,000/– ರೂ.ಗಳಾಗಿರುವುದರಿಂದ ಸಹಜವಾಗಿಯೇ ಫಲಾನುಭವಿಗಳು ರಾಜ್ಯ ಸರ್ಕಾರದ ಯೋಜನೆಗಳಿಗೆ ಆದ್ಯತೆ ನೀಡುತ್ತಿದ್ದು, ಇಂದಿರಾ ಆವಾಸ್ ಯೋಜನೆಯ ಪ್ರಗತಿಯು ಕುಂಠಿತಗೊಂಡಿರುತ್ತದೆ. ಈ ಕುರಿತು, 8–4–09ರಂದು ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ, ಕೇಂದ್ರ ಸರ್ಕಾರ ಪ್ರಾಯೋಜಿತ (ಸಿಸಿಎಸ್) ಮತ್ತು ಬಾಹ್ಯ ನೆರವಿನ ಯೋಜನೆಗಳ ಪರಿಶೀಲನಾ ಸಭೆಯಲ್ಲಿ ಚರ್ಚಿಸಿ, ಇಂದಿರಾ ಆವಾಸ್ ಯೋಜನೆಯು ಕೇಂದ್ರ ಸರ್ಕಾರದ ಯೋಜನೆಯಾಗಿರುವುದರಿಂದ ಅದು ಬಿಡುಗಡೆ ಮಾಡುವ ಅನುದಾನವನ್ನು ಸಮರ್ಪಕವಾಗಿ ಉಪಯೋಗಿಸಿಕೊಳ್ಳಲು, ಈ ಯೋಜನೆಗೆ ಆದ್ಯತೆ ನೀಡಿ ನಂತರ ರಾಜ್ಯ ಸರ್ಕಾರದ ಯೋಜನೆಗಳಿಗೆ ಆದ್ಯತೆ ನೀಡಬೇಕು; ಮತ್ತು ಇಂದಿರಾ ಆವಾಸ್ ಯೋಜನೆಯಡಿಯಲ್ಲಿ ಘಟಕ ವೆಚ್ಚವನ್ನು 40,000/–ರೂ.ಗಳಿಗೆ ಹೆಚ್ಚಿಸಬೇಕು ಹಾಗೂ ಹೆಚ್ಚುವರಿಯಾಗಿ ಬೇಕಾಗಿರುವ ಅನುದಾನ 5,000 ರೂ.ಗಳನ್ನು ರಾಜ್ಯ ಸರ್ಕಾರ ಭರಿಸಬೇಕು ಎಂದು ನಿರ್ಣಯಿಸಲಾಗಿದೆ. ಆರ್ಥಿಕ ಇಲಾಖೆಯು ಘಟಕ ವೆಚ್ಚದಲ್ಲಿನ ಮೊತ್ತವನ್ನು 35,000/– ರೂ.ಗಳಿಂದ 40,000/– ರೂ.ಗಳಿಗೆ ಸಹಾಯಧನವನ್ನಾಗಿ ಹೆಚ್ಚಿಸಲು ಮೇಲೆ (2)ರಲ್ಲಿ ಓದಲಾದ ಟಿಪ್ಪಣಿಯಲ್ಲಿ ಒಪ್ಪಿರುತ್ತದೆ. ಈ ಹಿನ್ನಲೆಯಲ್ಲಿ ಕೆಳಗಿನಂತೆ ಆದೇಶವನ್ನು ಪ್ರಸ್ತಾಪಿಸಲಾಗಿದೆ.

**ಸರ್ಕಾರದ ಆದೇಶ ಸಂ. ವಇ 02 ಹೆಚ್‌ಎವೈ 2009, ಬೆಂಗಳೂರು, ದಿನಾಂಕ: 24ನೇ ಆಗಸ್ಟ್ 2009**

ಇಂದಿರಾ ಆವಾಸ್ ಯೋಜನೆಯಡಿ ನಿರ್ಮಿಸಲಿರುವ ಮನೆಗಳಿಗೆ ಸಂಬಂಧಿಸಿದಂತೆ ಆಯಾ ಸಾಲಿನ ಆಯವ್ಯಯದಲ್ಲಿ ಸೂಚಿಸಿದ ಅನುದಾನಕ್ಕೆ ಸೀಮಿತವಾಗಿ, 2009–10ನೇ ಸಾಲಿನಿಂದ ಜಾರಿಗೆ ಬರುವಂತೆ ಹೊಸ ಸರಣಿ ಮನೆಗಳ ಘಟಕ ವೆಚ್ಚವನ್ನು 35,000/– ರೂ.ಗಳಿಂದ 40,000/– ರೂ.ಗಳಿಗೆ ಸಹಾಯಧನದ ರೂಪದಲ್ಲಿ ಹೆಚ್ಚಿಸಲು ಸರ್ಕಾರದ ಅನುಮೋದನೆ ನೀಡಲಾಗಿದೆ.

2. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ. ಆಇ/407/ವೆಚ್ಚ–9/2009 ದಿನಾಂಕ 10.07.2009ರಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2097

**ಕೆ. ಆರ್. ವಲ್ಲೂರ**

ಪೀಠಾಧಿಕಾರಿ–2, ವಸತಿ ಇಲಾಖೆ.

**ವಿಷಯ:** ಡಾ. ಡಿ. ಎಂ. ನಂಜುಂಡಪ್ಪನವರ ವರದಿಯಲ್ಲಿ ಸೂಚಿಸಿದ ರಾಜ್ಯದ 114 ಹಿಂದುಳಿದ ತಾಲ್ಲೂಕುಗಳನ್ನು ಗುಡಿಸಲುರಹಿತ ತಾಲ್ಲೂಕುಗಳನ್ನಾಗಿ ಮಾಡುವ ಬಗ್ಗೆ.

**ಓದಲಾಗಿದೆ:** (1) ಸರ್ಕಾರದ ಆದೇಶ ಸಂ. ವ ಇ 86 ಹೆಚ್‌ಎಎಮ್ 2009 ದಿನಾಂಕ 25.06.2009

(2) ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮದ ಪತ್ರ ಸಂ. MD RGRHCL 03 RAS 05 2009 ದಿನಾಂಕ 30.07.2009.

**ಪ್ರಸ್ತಾವನೆ:**

ಡಾ. ಡಿ. ಎಂ. ನಂಜುಂಡಪ್ಪನವರ ವರದಿಯಲ್ಲಿ ಗುರುತಿಸಿರುವಂತೆ ರಾಜ್ಯದ 114 ಹಿಂದುಳಿದ ತಾಲ್ಲೂಕುಗಳನ್ನು ಗುಡಿಸಲುರಹಿತ ತಾಲ್ಲುಕುಗಳನ್ನಾಗಿ ಮಾಡಲು, ಸವಿವರ ಯೋಜನಾ ವರದಿಗಳನ್ನು (Detailed Project Report) ತಯಾರಿಸಿ ಕೇಂದ್ರ ಸರ್ಕಾರಕ್ಕೆ ಸಲ್ಲಿಸಲು ಹಮ್ಮಿಕೊಂಡಿರುವ ಕೆಲಸ–ಕಾರ್ಯಗಳನ್ನು ಸಂಘಟಿಸಲು ರಾಜ್ಯದ ಎಲ್ಲ ವಿಭಾಗಗಳಿಗೆ ತಕ್ಷಣದಿಂದ ಜಾರಿಗೆ ಬರುವಂತೆ ಒಟ್ಟು ಐದು ಜನ ಸಮನ್ವಯ ಅಧಿಕಾರಿಗಳನ್ನು ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ನೇಮಕ ಮಾಡಲಾಗಿತ್ತು. ಇವರಲ್ಲಿ ಮೈಸೂರು ವಿಭಾಗಕ್ಕೆ ನೇಮಕ ಮಾಡಲಾಗಿದ್ದ ಶ್ರೀ ಕೆ.ಪಿ. ಶಿವಕುಮಾರ್, ಅಧೀಕ್ಷಕ

ಅಭಿಯಂತರರು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು ಇವರು ವರ್ಗಾವಣೆಯಾಗಿದ್ದರಿಂದ ಇವರ ಸ್ಥಾನದಲ್ಲಿ ಬೇರೆ ಅಧಿಕಾರಿಗಳನ್ನು ನೇಮಕ ಮಾಡುತ್ತ ಈ ಕೆಳಗಿನಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ. ವಇ 86 ಹೆಚ್‌ಎಎಮ್ 2009, ಬೆಂಗಳೂರು, ದಿನಾಂಕ: 28ನೇ ಅಗಸ್ಟ್ 2009**

ಡಾ. ಡಿ. ಎಂ. ನಂಜುಂಡಪ್ಪನವರ ವರದಿಯಲ್ಲಿ ಗುರುತಿಸಿರುವಂತೆ ರಾಜ್ಯದ 114 ಹಿಂದುಳಿದ ತಾಲ್ಲೂಕುಗಳನ್ನು ಗುಡಿಸಲುರಹಿತ ತಾಲ್ಲುಕುಗಳನ್ನಾಗಿ ಮಾಡಲು, ಸವಿವರ ಯೋಜನಾ ವರದಿಗಳನ್ನು (Detailed Project Report) ತಯಾರಿಸಿ ಕೇಂದ್ರ ಸರ್ಕಾರಕ್ಕೆ ಸಲ್ಲಿಸಲು ಹಮ್ಮಿಕೊಂಡಿರುವ ಕೆಲಸ–ಕಾರ್ಯಗಳನ್ನು ಸಂಘಟಿಸಲು ಮೈಸೂರು ವಿಭಾಗಕ್ಕೆ ಸಮನ್ವಯ ಅಧಿಕಾರಿಯಾಗಿ ನೇಮಕಗೊಂಡಿದ್ದ ಶ್ರೀ ಕೆ. ಪಿ. ಶಿವಕುಮಾರ್, ಅಧೀಕ್ಷಕ ಅಭಿಯಂತರರು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು ಇವರ ಬದಲಾಗಿ ಶ್ರೀ ಭಾಸ್ಕರ್, ಉಪ ನಿರ್ದೇಶಕರು, ಕರ್ನಾಟಕ ರಾಜ್ಯ ನಿರ್ಮಾಣ ಕೇಂದ್ರ, ಬೆಂಗಳೂರು ಹಾಗೂ ಶ್ರೀ ಕುಮಾರ್ ಎಸ್.ಡಿ., ಉಪ ನಿರ್ದೇಶಕರು, ಕರ್ನಾಟಕ ರಾಜ್ಯ ನಿರ್ಮಾಣ ಕೇಂದ್ರ, ಬೆಂಗಳೂರು ಇವರನ್ನು ಮೈಸೂರು ವಿಭಾಗಕ್ಕೆ ಸಮನ್ವಯ ಅಧಿಕಾರಿಗಳನ್ನಾಗಿ ತಕ್ಷಣದಿಂದಾಗಿ ಜಾರಿಗೆ ಬರುವಂತೆ ನೇಮಕ ಮಾಡಲಾಗಿದೆ.

ಸಮನ್ವಯ ಅಧಿಕಾರಿಗಳ ಕರ್ತವ್ಯಗಳು ಈ ಕೆಳಗಿನಂತಿವೆ:

1. ಸಮನ್ವಯ ಅಧಿಕಾರಿಗಳು ತಮ್ಮ ಇಲಾಖೆಯ ದಿನನಿತ್ಯದ ಕೆಲಸಗಳೊಂದಿಗೆ ಸಮನ್ವಯ ಅಧಿಕಾರಿಯ ಕರ್ತವ್ಯವನ್ನೂ ನಿಭಾಯಿಸುವರು. ಅನುಬಂಧದಲ್ಲಿನ ಪಟ್ಟಿಯಂತೆ ತಮ್ಮ ವ್ಯಾಪ್ತಿಗೆ ಬರುವ ತಾಲ್ಲೂಕುಗಳನ್ನು ಗುರುತಿಸಿಕೊಳ್ಳುವುದು.
2. ಗುಡಿಸಲುವಾಸಿಗಳ ಪಟ್ಟಿ ತಯಾರಿಸಲು ಎಲ್ಲ ಜಿಲ್ಲಾಧಿಕಾರಿಗಳಿಗೆ ಮತ್ತು ಜಿಲ್ಲಾ ಪಂಚಾಯತ್‌ಗಳ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳಿಗೆ ಈಗಾಗಲೆ ಸೂಚನೆಗಳನ್ನು ನೀಡಲಾಗಿದ್ದು, ಅದರಂತೆ ಅವರೊಂದಿಗೆ ಸತತ ಸಂಪರ್ಕದಲ್ಲಿದ್ದು, ಈ ಕಾರ್ಯಕ್ರಮವನ್ನು ನಿಗದಿತ ಅವಧಿಯೊಳಗಾಗಿ ಸಂಪೂರ್ಣಗೊಳಿಸುವುದು.
3. ಗುಡಿಸಲುವಾಸಿಗಳ ಪಟ್ಟಿ ತಯಾರಿಸುವಲ್ಲಿ ಎದುರಿಸಬಹುದಾದ ತೊಡಕುಗಳನ್ನು ಸ್ಥಳೀಯ ಚುನಾಯಿತ ಪ್ರತಿನಿಧಿಗಳ ಅಥವಾ ಜಿಲ್ಲಾಧಿಕಾರಿಗಳ ಉಪಸ್ಥಿತಿಯಲ್ಲಿ ನಿವಾರಿಸುವುದು.
4. ಸಮನ್ವಯ ಅಧಿಕಾರಿಗಳ ಈ ಕಾರ್ಯನಿರ್ವಹಣೆಯಲ್ಲಿ ಭರಿಸಬಹುದಾದ ಪ್ರಯಾಣ ಭತ್ಯೆ ಮತ್ತು ದಿನಭತ್ಯೆಗಳನ್ನು ತಮ್ಮ ಕಛೇರಿಯಿಂದಲೇ ನಿಯಮಾನುಸಾರ ಪಡೆಯಲು ಅರ್ಹರಾಗಿರುತ್ತಾರೆ. ಈ ವೆಚ್ಚಗಳಲ್ಲದೆ ಸವಿವರ ಯೋಜನಾ ವರದಿ ಮತ್ತಿತರ ವರದಿಗಳನ್ನು ಸಿದ್ಧಪಡಿಸುವ ಸಲುವಾಗಿ ಸರ್ಕಾರೇತರ ಸಂಸ್ಥೆಗಳ ನೇಮಕಾತಿ ಮತ್ತಿತರ ವೆಚ್ಚಗಳಿಗಾಗಿ ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮದ ಮೂಲಕ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿ, ಭರಿಸಬಹುದಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಆರ್. ವಲ್ಲೂರ**

ಪೀಠಾಧಿಕಾರಿ–2, ವಸತಿ ಇಲಾಖೆ.

**ಅನುಬಂಧ**

**Identification of Regional Backwardness Based on the Comprehensive Composite Development Index, 2001**

| Sl. No. | District | Most Backward Taluks (index in the range from 0.53 to 0.79) | Index | More Backward Taluks (index in the range from 0.80 to 0.88) | Index | Backward Taluks (index in the range from 0.89 to 0.99) | Index |
|---|---|---|---|---|---|---|---|
| 1 | Bellary | Sandur | 0.75 | Siruguppa | 0.86 | | |
| | Bellary | Kidligi | 0.74 | H.B.Halli | 0.84 | | |
| | Bellary | | | Hadagali | 0.81 | | |
| 2 | Bidar | Bhalki | 0.74 | | | | |
| | Bidar | Humnabad | 0.73 | | | | |
| | Bidar | Basavakalyan | 0.69 | | | | |
| | Bidar | Aurad | 0.65 | | | | |
| 3 | Gulbarga | Sedam | 0.72 | | | Gulbarga | 0.89 |
| | Gulbarga | Shorapur | 0.70 | | | | |
| | Gulbarga | Yadgir | 0.67 | | | | |
| | Gulbarga | Chittapur | 0.65 | | | | |

| Sl. No. | District | Most Backward Taluks (index in the range from 0.53 to 0.79) | Index | More Backward Taluks (index in the range from 0.80 to 0.88) | Index | Backward Taluks (index in the range from 0.89 to 0.99) | Index |
|---|---|---|---|---|---|---|---|
| | Gulbarga | Afzalpur | 0.62 | | | | |
| | Gulbarga | Shahapur | 0.62 | | | | |
| | Gulbarga | Aland | 0.61 | | | | |
| | Gulbarga | Chincholi | 0.57 | | | | |
| | Gulbarga | Jevargi | 0.57 | | | | |
| 4 | Koppal | Kushtagi | 0.64 | Koppal | 0.81 | Gangavathi | 0.93 |
| | Koppal | Yalburga | 0.63 | | | | |
| 5 | Raichur | Sindhanur | 0.78 | Raichur | 0.87 | | |
| | Raichur | Manvi | 0.69 | | | | |
| | Raichur | Lingsugur | 0.63 | | | | |
| | Raichur | Devdurga | 0.53 | | | | |
| **I** | **Gulbarga Division** | **21** | | **5** | | **2** | |
| 6 | Bagalkot | Bilagi | 0.77 | Hunugund | 0.85 | | |
| | Bagalkot | | | Badami | 0.82 | | |
| 7 | Belgaum | | | Athani | 0.88 | Raybag | 0.97 |
| | Belgaum | | | Gokak | 0.86 | Bailhongala | 0.95 |
| | Belgaum | | | Soundatti | 0.86 | Raidurg | 0.90 |
| | | | | | | Hukkeri | 0.89 |
| 8 | Bijapur | Muddebihal | 0.69 | | | Bijapur | 0.92 |
| | Bijapur | B. Bagewadi | 0.69 | | | | |
| | Bijapur | Indi | 0.66 | | | | |
| | Bijapur | Sindgi | 0.64 | | | | |
| 9 | Dharwad | | | Kalghatagi | 0.84 | Navalgund | 0.99 |
| | | | | | | Kundagol | 0.95 |
| 10 | Gadag | | | Mundaragi | 0.88 | Ron | 0.92 |
| | Gadag | | | | | Shirahatti | 0.89 |
| 11 | Haveri | | | Savanur | 0.87 | Haveri | 0.99 |
| | Haveri | | | Shiggaon | 0.84 | Byadagi | 0.97 |
| | | | | Hirekerur | 0.88 | Hanagal | 0.92 |
| 12 | Uttara Kannada | | | Supa (Joida) | 0.87 | Ankola | 0.98 |
| | Uttara Kannada | | | Bhatkal | 0.82 | Siddapur | 0.92 |
| **II** | **Belgaum Division** | **5** | | **12** | | **14** | |
| 13 | Bangalore (U) | | | | | Anekal | 0.90 |
| 14 | Bangalore (R) | Kanakapura | 0.74 | | | Hosakote | 0.97 |
| | | Magadi | 0.79 | | | Chennapatna | 0.95 |
| 15 | Chitradurga | Hosadurga | 0.78 | Hiriyur | 0.87 | | |
| | Chitradurga | | | Molakalmuru | 0.84 | | |
| | Chitradurga | | | Holalkere | 0.84 | | |
| | | | | Challakere | 0.81 | | |

| Sl. No. | District | Most Backward Taluks (index in the range from 0.53 to 0.79) | Index | More Backward Taluks (index in the range from 0.80 to 0.88) | Index | Backward Taluks (index in the range from 0.89 to 0.99) | Index |
|---|---|---|---|---|---|---|---|
| 16 | Davanagere | Channagiri | 0.78 | Honnali | 0.86 | | |
| | Davanagere | Harapanahalli | 0.72 | Jagalur | 0.80 | | |
| 17 | Kolar | Bagepalli | 0.76 | Mulbagal | 0.88 | Srinivasapura | 0.98 |
| | Kolar | | | Gudibanda | 0.84 | Chintamani | 0.97 |
| | Kolar | | | Gowribidanur | 0.83 | Bangarpet | 0.96 |
| | Kolar | | | | | Malur | 0.93 |
| | Kolar | | | | | Sidlaghatta | 0.91 |
| 18 | Shimoga | | | Soraba | 0.82 | Shikaripura | 0.92 |
| 19 | Tumkur | Kunigal | 0.79 | Turuvekere | 0.86 | | |
| | Tumkur | Madhugiri | 0.74 | Koratagere | 0.83 | | |
| | Tumkur | Gubbi | 0.73 | C.N.Halli | 0.83 | | |
| | Tumkur | Sira | 0.73 | | | | |
| | | Pavagada | 0.72 | | | | |
| **III** | **Bangalore Division** | **11** | | **13** | | **9** | |
| 20 | Chamarajanagar | Chamarajanagar | 0.78 | Gundlupet | 0.81 | | |
| | Chamarajanagar | | | Kollegal | 0.80 | | |
| 21 | Chikmagalur | | | Kadur | 0.81 | Tarikere | 0.89 |
| 22 | Dakshina Kannada | | | | | | |
| 23 | Hassan | | | Arakalgud | 0.84 | Holenarasipura | 0.97 |
| | | | | | | Belur | 0.94 |
| | | | | | | Channarayapatna | 0.92 |
| | | | | | | Arasikere | 0.91 |
| 24 | Kodagu | | | | | | |
| 25 | Mandya | | | Malavalli | 0.84 | Srirangapattana | 0.98 |
| | Mandya | | | Nagamangala | 0.83 | Maddur | 0.95 |
| | Mandya | | | Krishnarajpet | 0.80 | Pandavapura | 0.94 |
| 26 | Mysore | H.D. Kote | 0.72 | Hunsur | 0.88 | Periyapatna | 0.97 |
| | Mysore | | | T.Narasipur | 0.87 | K.R.Nagar | 0.92 |
| | Mysore | | | Nanjanagud | 0.87 | | |
| 27 | Udupi | | | | | | |
| **IV** | **Mysore Division** | **2** | | **10** | | **10** | |
| A | Northern Region (I + II) | 26 | | 17 | | 16 | 59 |
| B | Southern Region (III + IV) | 13 | | 23 | | 19 | 55 |
| | **Grand Total** | **39** | | **40** | | **35** | **114** |

**Note:** Blanks in the columns indicate that there are no taluks under concerned groups.

6. The division-wise breakup of these 114 taluks is as follows:

| Divisions | Most Backward | More Backward | Backward | Total |
|---|---|---|---|---|
| Gulbarga | 21 | 5 | 2 | 28 |
| Belgaum | 5 | 12 | 14 | 31 |
| Bangalore | 11 | 13 | 9 | 33 |
| Mysore | 2 | 10 | 10 | 22 |
| **Total** | **39** | **40** | **35** | **114** |

7. While apparently there seems to be an insignificant regional disparity, there being 59 backward taluks in the Northern Region as against 55 backward taluks in the Southern Region, a closer inspection reveals that, at the lowest strata of development, the Northern Region is definitely worse off, considering that it has 26 "Most Backward Taluks" as against only 13 in the Southern Region. The North-South divide is clearly apparent.

**ಕೆ. ಆರ್. ವಲ್ಲೂರ**

ಪಿ.ಆರ್. 2098 ಪೀಠಾಧಿಕಾರಿ–2, ವಸತಿ ಇಲಾಖೆ.

**ವಿಷಯ:** ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ನಿಯಮಿತದ ಶೇರುದಾರರ ಬದಲಾವಣೆ ಕುರಿತು.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ವಇ 183 ಹೆಚ್‌ಎಹೆಚ್ 99, ದಿನಾಂಕ: 31.3.2003.

2) ಸರ್ಕಾರದ ಆದೇಶ ಸಂಖ್ಯೆ: ವಇ 09 ಹೆಚ್‌ಎಹೆಚ್ 2007, ದಿನಾಂಕ: 20.8.2007.

**ಪ್ರಸ್ತಾವನೆ:**

ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ನಿಯಮಿತವು ಒಂದು ಸಾರ್ವಜನಿಕ ನಿಯಮಿತ ಸಂಸ್ಥೆಯಾಗಿದ್ದು, ತಲಾ 100/– ರೂ.ಗಳ ಒಟ್ಟು 3.00 ಲಕ್ಷ ಷೇರುಗಳ ಸಂದಾಯಿತ ಬಂಡವಾಳ ಹೊಂದಿರುತ್ತದೆ. ಇದರಲ್ಲಿ 2,99,993 ಶೇರುಗಳು ಘನತೆವೆತ್ತ ರಾಜ್ಯಪಾಲರು ಹೊಂದಿದ್ದು, ಉಳಿದ 7 ಶೇರುಗಳು ಕರ್ನಾಟಕ ಸರ್ಕಾರದ ವತಿಯಿಂದ 7 ಅಧಿಕಾರಿಗಳ ಹೆಸರಿನಲ್ಲಿರುತ್ತದೆ. ಈ ಅಧಿಕಾರಿಗಳು ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮದ ಆಡಳಿತ ಮಂಡಳಿಯ ನಿರ್ದೇಶಕರಾಗಿದ್ದು, ಅವರು ವರ್ಗಾವಣೆಯಾದಂತೆ ಆ ಸ್ಥಾನಗಳನ್ನು ವಹಿಸಿಕೊಂಡ ಅಧಿಕಾರಿಗಳ ಹೆಸರುಗಳಿಗೆ ಶೇರುಗಳು ವರ್ಗಾವಣೆಯಾಗ ಬೇಕಾಗಿರುತ್ತದೆ. ಅಂತೆಯೇ ಈ ಕೆಳಕಾಣಿಸಿದ ಆದೇಶ.

**ಸರ್ಕಾರದ ಆದೇಶ ಸಂ. ವಇ 80 ಹೆಚ್‌ಎಎಂ 2009, ಬೆಂಗಳೂರು, ದಿನಾಂಕ: 29ನೇ ಆಗಸ್ಟ್ 2009**

ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ನಿಯಮಿತದ ಸಂಸ್ಥಾ ನಿವೇದನಾ ಪತ್ರದ ಅನುಚ್ಛೇದ 63 ರಿಂದ 69ರಲ್ಲಿ ಪ್ರದತ್ತವಾದ ಅಧಿಕಾರದ ಮೇರೆಗೆ ಈ ಕೆಳಕಾಣಿಸಿದಂತೆ ಶೇರುಗಳನ್ನು ಅಧಿಕಾರಿಗಳಿಗೆ ವರ್ಗಾಯಿಸಲು ಸರ್ಕಾರದ ಅನುಮತಿ ನೀಡಲಾಗಿದೆ.

| ಕ್ರ. ಸಂ. | ಶೇರು ಹೊಂದಿರುವ ಅಧಿಕಾರಿಗಳ ಹೆಸರು | ಶೇರುಗಳನ್ನು ವರ್ಗಾಯಿಸಲ್ಪಡಬೇಕಾಗಿರುವ ಅಧಿಕಾರಿಗಳ ಹೆಸರು |
|---|---|---|
| 1 | ಶ್ರೀಮತಿ ಶೋಭ ನಂಬೀಷನ್ ಐ.ಎ.ಎಸ್. | ಶ್ರೀ ಜಿ.ವಿ. ಕೊಂಗವಾಡ, ಐ.ಎ.ಎಸ್.<br>ಸರ್ಕಾರದ ಕಾರ್ಯದರ್ಶಿಗಳು, ವಸತಿ ಇಲಾಖೆ. |
| 2 | ಶ್ರೀ ಎಂ.ಆರ್. ಶ್ರೀನಿವಾಸ ಮೂರ್ತಿ, ಐ.ಎ.ಎಸ್. | ಶ್ರೀ ಅನಿಲ್ ಕುಮಾರ್ ಝಾ, ಐ.ಎ.ಎಸ್.<br>ಸರ್ಕಾರದ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ. |
| 3. | ಶ್ರೀ ಬಾಬುರಾವ್ ಮುಡಬಿ, ಐ.ಎ.ಎಸ್. | ಶ್ರೀ ಬಿ.ಹೆಚ್. ಅನಿಲ್‌ಕುಮಾರ್, ಐ.ಎಎಸ್.<br>ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ. |
| 4. | ಶ್ರೀ ಪಿ. ಬೋರೇಗೌಡ, ಕೆ.ಎ.ಎಸ್. | ಶ್ರಿ ಎಸ್. ಪುಟ್ಟಸ್ವಾಮಿ, ಕೆ.ಎ.ಎಸ್.<br>ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ |
| 5. | ಶ್ರೀ ಹೆಚ್.ವಿ. ಪಾರ್ಶ್ವನಾಥ್, ಐ.ಎ.ಎಸ್. | ಶ್ರೀ ಎಸ್.ಎಸ್. ಪಟ್ಟಣಶೆಟ್ಟಿ, ಐ.ಎ.ಎಸ್.<br>ವ್ಯವಸ್ಥಾಪಕ ನಿರ್ದೇಶಕರು,<br>ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ನಿಯಿತ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಆರ್. ವಲ್ಲೂರ**

ಪಿ.ಆರ್. 2099 ಪೀಠಾಧಿಕಾರಿ–2, ವಸತಿ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಎನ್.ಆರ್.ಹೆಚ್.ಎಂ. ಯೋಜನೆಯಡಿಯಲ್ಲಿ ರಾಜ್ಯ ಸರ್ಕಾರದ ಶೇ. 15 ರಷ್ಟು ವಂತಿಗೆಯನ್ನು 2009–10ನೇ ಸಾಲಿನ ಆಯವ್ಯಯದಲ್ಲಿ ಕಲ್ಪಿಸುವ ಬಗ್ಗೆ.

**ಓದಲಾಗಿದೆ:** ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: 264 ವೆಚ್ಚ–5–2009, ದಿನಾಂಕ: 26–03–2009

**ಪ್ರಸ್ತಾವನೆ:**

ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಭಿಯಾನದ ಅಡಿ ರಾಜ್ಯದಲ್ಲಿ ಸಾರ್ವಜನಿಕ ಆರೋಗ್ಯ ಸುಧಾರಣೆಗಾಗಿ ಹಲವಾರು ಯೋಜನೆಗಳನ್ನು ಕೈಗೊಳ್ಳಲಾಗುತ್ತಿದೆ, ಈ ಬಗ್ಗೆ ಕೇಂದ್ರ ಸರ್ಕಾರವು ಅಗತ್ಯ ಅನುದಾನವನ್ನು ಮಂಜೂರು ಮಾಡುತ್ತದೆ. ಕೇಂದ್ರ ಸರ್ಕಾರವು ಎನ್.ಆರ್.ಹೆಚ್.ಎಂ.ಗೆ ಅನುದಾನ ಬಿಡುಗಡೆ ಮಾಡಬೇಕಾದಲ್ಲಿ ರಾಜ್ಯ ಸರ್ಕಾರದ ವಂತಿಕೆಯಾಗಿ ಶೇ. 15 ರಷ್ಟು ಅನುದಾನವನ್ನು ಜಮೆ ಮಾಡಬೇಕೆಂದು ಷರತ್ತು ವಿಧಿಸಿರುತ್ತದೆ.

2009–10ನೇ ಸಾಲಿನಲ್ಲಿ ಕೇಂದ್ರ ಸರ್ಕಾರದಿಂದ ಅಂದಾಜು ರೂ. 500 ಕೋಟಿಗಳಿಗಿಂತಲೂ ಹೆಚ್ಚು ಸಹಾಯಾನುಧನ ದೊರೆಯಲಿದೆ. ಇದಕ್ಕೆ ಪೂರಕವಾಗಿ ಕೇಂದ್ರ ಸರ್ಕಾರ ವಿಧಿಸಿರುವ ಷರತ್ತಿನಂತೆ ರಾಜ್ಯ ಸರ್ಕಾರದ ಭಾಗವಾಗಿ ಶೇ. 15 ರಷ್ಟು ಅನುದಾನವನ್ನು ರಾಜ್ಯ ಆಯವ್ಯಯದಲ್ಲಿ ಒದಗಿಸಿ, ರಾಜ್ಯ ಆರೋಗ್ಯ ಸಂಘದ ಮೂಲಕ ಬಿಡುಗಡೆ ಮಾಡಬೇಕಿದೆ.

2009–10ನೇ ಸಾಲಿನ ಆಯವ್ಯದ ಕರಡು ಅಂದಾಜುಗಳನ್ನು ಈಗಾಗಲೇ ಆರ್ಥಿಕ ಇಲಾಖೆಗೆ ಕಳುಹಿಸಲಾಗಿದ್ದು, ರೂ. 146.15 ಕೋಟಿಗಳಷ್ಟು ಅನುದಾನವನ್ನು ರಾಜ್ಯ ಆರೋಗ್ಯ ಸಂಘದ ಮೂಲಕ ಬಿಡುಗಡೆ ಮಾಡಲು ಪರಿಗಣಿಸಿ, ರಾಜ್ಯ ಆಯವ್ಯಯದಲ್ಲಿ ಓದಲಾದ ಕ್ರಮ ಸಂಖ್ಯೆ (1)ರ ಟಿಪ್ಪಣಿಯಲ್ಲಿ 2009–10ನೇ ಸಾಲಿಗೆ ಒದಗಿಸಲಾಗಿರುವ ಅನುದಾನ ಈ ಕೆಳಗಿನಂತೆ ಹಂಚಿಕೆ ಮಾಡಿದೆ.

(ರೂ. ಲಕ್ಷಗಳಲ್ಲಿ)

| ಕ್ರ. ಸಂ | ಲೆಕ್ಕ ಶೀರ್ಷಿಕೆ | 2009–10 ರಲ್ಲಿ ಒದಗಿಸಿರುವುದು |
|---|---|---|
| 1 | 2210–80–800–0–17 ತಾಯಿ ಭಾಗ್ಯ | 1000.00 |
| 2 | 2210–80–800–0–18 ಆರೋಗ್ಯ ಕವಚ (ಇ.ಎಂ.ಆರ್.ಐ.) | 1000.00 |
| 3 | 2211–00–103–0–73 ಮಡಿಲು ಕಿಟ್ | 412.00 |
| 4 | 2210–80–800–0–15 ಸುವರ್ಣ ಸುರಕ್ಷ (ಆಪತ್ಬಾಂಧವ) | 2000.00 |
| 5 | 2210–01–110–2–40 ಟೆಲಿಮೆಡಿಷಿನ್ | 100.00 |
| 6 | 2210–01–110–2–41 ಜೆರಿಯಾಟ್ರಿಕ್ ಸೇವೆಗಳು | 110.00 |
| 7 | 2210–01–800–0–06 ಆರೋಗ್ಯ ಸೇವೆಗಾಗಿ 12ನೇ ಹಣಕಾಸು ಆಯೋಗದ ಅನುದಾನ | 3750.00 |
| 8 | 2210–06–800–0–81 ಕೆ.ಹೆಚ್.ಎಸ್.ಡಿ.ಆರ್.ಪಿ. ಆರ್ಗನೈಸೇಸನ್ ಡೆವಲಪ್‌ಮೆಂಟ್ | 488.00 |
| 9 | 2210–06–800–0–82 ಕೆ.ಹೆಚ್.ಎಸ್.ಡಿ.ಆರ್.ಪಿ. (ಪಿ.ಹೆಚ್.ಸಿ.ಎಫ್.) | 1560.00 |
| 10 | 2210–06–800–0–83 ಕೆ.ಹೆಚ್.ಎಸ್.ಡಿ.ಆರ್.ಪಿ. ಹೆಲ್ತ್ ಫೈನಾನ್ಸಿಂಗ್ | 766.00 |
| 11 | 2210–06–800–0–85 ಕೆ.ಹೆಚ್.ಎಸ್.ಡಿ.ಆರ್.ಪಿ. ಸರ್ವಿಸ್ ಇಂಪ್ರೂಮೆಂಟ್ ಚಾಲೆಂಜ್ ಫಂಡ್ | 1845.00 |
| | **ಒಟ್ಟು** | **13,031–00** |

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 11 ಎಫ್.ಪಿ.ಆರ್. 2009, ಬೆಂಗಳೂರು, ದಿನಾಂಕ: 17ನೇ ಆಗಸ್ಟ್ 2009**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನ ಯೋಜನೆಯಡಿಯಲ್ಲಿ ಕೇಂದ್ರ ಸರ್ಕಾರವು 2009–10ನೇ ಸಾಲಿಗೆ ಆಯವ್ಯಯದಲ್ಲಿ ಕರ್ನಾಟಕ ರಾಜ್ಯಕ್ಕೆ ರೂ. 13031–00

(ಹದಿಮೂರು ಸಾವಿರದ ಮೂವತ್ತೊಂದು ಲಕ್ಷ ರೂ.ಗಳು ಮಾತ್ರ) ಲಕ್ಷಗಳನ್ನು ಹಂಚಿಕೆ ಮಾಡಿದ್ದು, ಈ ಹಣವನ್ನು ರಾಜ್ಯ ಆರೋಗ್ಯ ಸಂಘಕ್ಕೆ ಬಿಡುಗಡೆ ಮಾಡಿ ಸರ್ಕಾರದ ತನ್ನ ಪಾಲಿನ ಶೇ. 15 ರಷ್ಟು ವಂತಿಗೆಯೆಂದು ಪರಿಗಣಿಸಿ ಬಿಡುಗಡೆ ಮಾಡಲು ಆದೇಶಿಸಿದೆ.

ಕೇಂದ್ರ ಸರ್ಕಾರದ ಸೂಚನೆಗಳ ಅನ್ವಯ ಆಯವ್ಯಯ ಒದಗಿಸುವ ನಿಟ್ಟಿನಲ್ಲಿ ಈ ಆದೇಶವನ್ನು ಹೊರಡಿಸಲಾಗಿದೆ. ಆದುದರಿಂದ ಪ್ರತಿ ಕಾರ್ಯಕ್ರಮದ ಮೇಲುಸ್ತುವಾರಿಯು ಆಯಾ ಇಲಾಖಾ ಮುಖ್ಯಸ್ಥರ ಅಂದರೆ, ಆಯುಕ್ತರು/ ಕೆ.ಹೆಚ್.ಎಸ್.ಡಿ.ಆರ್.ಪಿ./ ಆಡಳಿತಾಧಿಕಾರಿ/ಎನ್.ಆರ್.ಹೆಚ್.ಎಂ. ಅಭಿಯಾನ ನಿರ್ದೇಶಕರ ಜವಾಬ್ದಾರಿಯಾಗಿರುತ್ತದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ/662/ವೆಚ್ಚ–5/ 2009, ದಿನಾಂಕ: 4–07–2009 ಮತ್ತು ಆಇ/657/ವೆಚ್ಚ–5/2009, ದಿನಾಂಕ: 22–05–2009 ರಲ್ಲಿ ನೀಡಿರುವ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಚಿಕ್ಕೇಗೌಡ**

ಪಿ.ಆರ್. 1999

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಹೆಚ್. ಚಂದ್ರಶೇಖರಯ್ಯ, ನಿವೃತ್ತ ಮುಖ್ಯ ಇಂಜಿನಿಯರ್, ಇವರ ವಿರುದ್ಧದ ಇಲಾಖಾ ವಿಚಾರಣೆ ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂ. ಸಿಆಸುಇ 63 ಎಸ್ಇಎನ್ 2005, ದಿನಾಂಕ: 07.11.2007.
2. ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು, ಇವರ ಪತ್ರ ದಿನಾಂಕ: 26.06.2008.
3. ನೋಟೀಸ್ ಸಂಖ್ಯೆ: ಸಿಆಸುಇ 63 ಎಸ್ಇಎನ್ 2005, ದಿನಾಂಕ: 09.07.2008.
4. ಪತ್ರ ಸಂಖ್ಯೆ: ಸಿಆಸುಇ 63 ಎಸ್ಇಎನ್ 2005, ದಿನಾಂಕ: 13.04.2009.
5. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 27/ಸಿಎನ್ಎಸ್ 09 ದಿನಾಂಕ:17.06.2009.

**ಪ್ರಸ್ತಾವನೆ :**

ಶ್ರೀ ಹೆಚ್. ಚಂದ್ರಶೇಖರಯ್ಯ, ನಿವೃತ್ತ ಮುಖ್ಯ ಇಂಜಿನಿಯರ್, ಇವರು 2003–04ನೇ ಸಾಲಿನಲ್ಲಿ ಕಾಡಾ ನೀರಾವರಿ ಯೋಜನೆಗಳ ವಲಯ, ಗುಲ್ಬರ್ಗಾ, ಪಾಧಿಕಾರದಲ್ಲಿ ಆಡಳಿತಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ, 2003–04ನೇ ಸಾಲಿನ ವಿಶೇಷ ಘಟಕ ಯೋಜನೆ ಮತ್ತು ಗಿರಿಜನ ಉಪ ಯೋಜನೆ ಅಡಿಯಲ್ಲಿ ಟೆಂಡರ್ ಇತ್ಯರ್ಥ ಪಡಿಸುವಾಗ ಕಡಿಮೆ ದರ ನಮೂದಿಸಿದ ಸಂಸ್ಥೆಯನ್ನು ವಿನಾಕಾರಣ ತಿರಸ್ಕರಿಸಿ ಅದಕ್ಕಿಂತ ಹೆಚ್ಚಿನ ದರ ನಮೂದಿಸಿದ ಸಂಸ್ಥೆಯಿಂದ ನ್ಯಾಪ್‌ಸಾಕ್ ಸ್ಪ್ರೇಯರ್ ಹಾಗೂ ಪವರ್ ಸ್ಪ್ರೇಯರ್‌ಗಳನ್ನು ಸರಬರಾಜು ಮಾಡಲು ಆದೇಶ ನೀಡುವ ಮೂಲಕ ದುರ್ನಡತೆ ಎಸಗಿದ ಆರೋಪಕ್ಕಾಗಿ ಮೇಲೆ (1) ರಲ್ಲಿ ಓದಲಾದ ದಿನಾಂಕ: 07.11.2007ರ ಸರ್ಕಾರಿ ಆದೇಶದಲ್ಲಿ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಆದೇಶಿಸಿ ಪ್ರಾಥಮಿಕ ಆಯುಕ್ತರು, ಬೆಂಗಳೂರು, ಅವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಯಿತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಯವರು ಮೇಲೆ (2) ರಲ್ಲಿ ಓದಲಾದ ದಿನಾಂಕ: 26.06.2008ರ ವಿಚಾರಣಾ ವರದಿ ಸಲ್ಲಿಸಿ, ಆರೋಪ ಕುರಿತಂತೆ ಈ ಕೆಳಕಂಡ ನಿರ್ಣಯ ನೀಡಿದರು.

ಟೆಂಡರ್ ಅಧಿಸೂಚನೆಗೆ ಉತ್ತರವಾಗಿ 5 ಬಿಡ್ಡುಗಳು ಬಂದಿದ್ದು, ಇದರಲ್ಲಿ ಇಬ್ಬರು ಅಧಿಕೃತ ಮಾನ್ಯತೆ ಪಡೆಯದ ಕಾರಣ ಅವರಿಬ್ಬರನ್ನು ಹೊರತುಪಡಿಸಿ, ಉಳಿದ ಮೂವರಲ್ಲಿನ ಜೈಕಿಸಾನ್ ಆಗ್ರೋ ಕಂಪನಿಯ ಐಟಂಗೆ ರೂ. 1045/– ಹಾಕಿದ್ದು, ನಂತರ ಉಳಿದ ಐಟಂಗಳಿಗೆ ದರ ಸೂಚಿಸಿಲ್ಲದ ಕಾರಣ ಅವರ ಟೆಂಡರ್‌ನ್ನು ತಿರಸ್ಕರಿಸಲಾಯಿತು ಎಂದು ತಿಳಿಸಿ ಉಳಿದ ಇಬ್ಬರಲ್ಲಿ ಕಡಿಮೆ ದರ ರೂ. 1163/– ನಮೂದಿಸಿದ ಮೆ: ಶಹಾ ಮಿಷನರಿ ಸ್ಟೋರ್ಸ್, ಗುಲ್ಬರ್ಗಾ ಅವರಿಗೆ ಟೆಂಡರ್ ನೀಡಲಾಯಿತು. ಇದರಲ್ಲಿ ಕರ್ನಾಟಕ ಕೆ.ಟಿ.ಟಿ.ಪಿ. ಕಾಯ್ದೆಯನ್ವಯ ಯಾವುದೇ ಅಂಶವು ಉಲ್ಲಂಘನೆಯಾಗಿಲ್ಲವೆಂದು ಆರೋಪಿಯು ವಾದಿಸಿದ್ದಾನೆ. ಆದರೆ ಸಾಕ್ಷಿಗಳ ಹೇಳಿಕೆ ಹಾಗೂ ಟೆಂಡರ್ ದಾಖಲೆಗಳನ್ನು ಪರಿಶೀಲಿಸಿದಾಗ, ಅಪೂರ್ಣ ಟೆಂಡರ್‌ಗಳನ್ನು ಮಾತ್ರ ತಿರಸ್ಕರಿಸಲಾಗುವುದೆಂಬ ಷರತ್ತು ಮಾತ್ರ ಟಂಡರ್ ದಾಸ್ತಾನು ಯೋಜನೆಯಲ್ಲಿದೆ. ಎಲ್ಲಾ ಐಟಂಗಳಿಗೆ ಕಡ್ಡಾಯವಾಗಿ ದರವನ್ನು ನಮೂದಿಸಬೇಕೆಂದು ಟೆಂಡರ್ ದಾಸ್ತಾನು ಯೋಜನೆಯಲ್ಲಿ ಎಲ್ಲಿಯೂ ಸಹ ನಮೂದಿಸಿರುವುದಿಲ್ಲ. ಟೆಂಡರ್ ದಾಸ್ತಾನು ಯೋಜನೆಯಲ್ಲಿ ಇಲ್ಲದೆ ಷರತ್ತುಗಳನ್ನು ತಾವೇ ಭಾವಿಸಿಕೊಂಡು, ಟೆಂಡರ್ ನಿಯಮಗಳಿಗೆ ವಿರುದ್ಧವಾಗಿ ಒಂದು ಐಟಂಗೆ ಕಡಿಮೆ ದರ ನಮೂದಿಸಿರುವ ಸಂಸ್ಥೆಯನ್ನು ಬಿಟ್ಟು ಹೆಚ್ಚಿನ ದರ ನಮೂದಿಸಿರುವ ಸಂಸ್ಥೆಗೆ ಸರಬರಾಜು ಆದೇಶ ನೀಡಿರುವ ದುರ್ನಡತೆಯಾಗಿದೆ. ಆದ್ದರಿಂದ ಕಾಡಾ ಪ್ರಾಧಿಕಾರಕ್ಕೆ ರೂ. 29,235/– ಗಳ ನಷ್ಟ ಉಂಟಾಗಿದೆ ಎಂಬ ಆರೋಪ ಸಾಬೀತಾಗಿದೆ.

ಮೇಲೆ (3) ರಲ್ಲಿ ಓದಲಾದ ದಿನಾಂಕ: 17.07.2008ರ ನೋಟೀಸ್‌ನೊಡನೆ ವಿಚಾರಣಾ ವರದಿಯ ಪ್ರತಿಯನ್ನು ಆರೋಪಿ ಅಧಿಕಾರಿಗೆ ಒದಗಿಸಿ ವಿಚಾರಣಾ ವರದಿಯ ಕುರಿತು ಯಾವುದಾದರೂ ಅಹವಾಲು ಇದ್ದಲ್ಲಿ, ಸಲ್ಲಿಸಲು ಅವಕಾಶ ಕಲ್ಪಿಸಲಾಯಿತು. ನೋಟೀಸನ್ನು ದಿನಾಂಕ:21.07.2008 ರಂದು ಸ್ವೀಕರಿಸಿದ ಅಧಿಕಾರಿಯು ತನ್ನ ಉತ್ತರವನ್ನು ಸಲ್ಲಿಸಲಿಲ್ಲ. ವಿಚಾರಣಾ ವರದಿಯನ್ನು ದಾಖಲೆಗಳೊಡನೆ ಪರಿಶೀಲಿಸಲಾಗಿ, ಸಾಕ್ಷಿಗಳ ವಿಚಾರಣೆಯು ಸಮರ್ಪಕವಾಗಿ ನಡೆದಿದೆ. ಆರೋಪಿಯೂ ಸಹ ತಮ್ಮ ವಾದವನ್ನು ಸಮರ್ಥವಾಗಿ ಮಂಡಿಸಿದ್ದಾರೆ. ಟೆಂಡರ್ ದಾಸ್ತಾನು ಯೋಜನೆಯಡಿಯಲ್ಲಿ ನಮೂದಿಸಿರುವ ಎಲ್ಲಾ ಅಂಶಗಳನ್ನು ವಿಚಾರಣಾಧಿಕಾರಿಗಳು ದಾಖಲೆಗಳೊಡನೆ ಪರಿಶೀಲಿಸಿದ್ದು, ಕನಿಷ್ಠ ದರ ನಮೂದಿಸಿರುವ ಸಂಸ್ಥೆಯನ್ನು ಬಿಟ್ಟು ಹೆಚ್ಚಿನ ದರ ನಮೂದಿಸಿರುವ ಸಂಸ್ಥೆಗೆ ಆದೇಶ ನೀಡಿರುವುದು ಹಾಗೂ ಈ ಕ್ರಮದಿಂದ ರೂ. 29,736/– ಹೆಚ್ಚುವರಿ ಆರ್ಥಿಕ ಹೊರೆ ಉಂಟಾಗಿದ್ದು ಸಾಬೀತಾಗಿದೆ ಹಾಗೂ ಸದರಿ ಮೊತ್ತ ನಷ್ಟವಾಗಿದೆ. ಆದ್ದರಿಂದ ವಿಚಾರಣಾಧಿಕಾರಿಗಳ ನಿರ್ಣಯವನ್ನು ಸರ್ಕಾರವು ಒಪ್ಪುತ್ತದೆ ಹಾಗೂ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯೊಡನೆ ದಂಡನೆ ವಿಧಿಸಲು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 63, ಎಸ್‌ಇಎನ್ 2005, ಬೆಂಗಳೂರು, ದಿನಾಂಕ: 1ನೇ ಆಗಸ್ಟ್ 2009**

ಕರ್ನಾಟಕ ನಾಗರೀಕ ಸೇವಾ ನಿಯಮಾನುಸಾರ 214ನೇ ನಿಯಮದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಶ್ರೀ ಹೆಚ್. ಚಂದ್ರಶೇಖರಯ್ಯ, ನಿವೃತ್ತ ಮುಖ್ಯ ಇಂಜಿನಿಯರ್, ಅವರ ಮಾಸಿಕ ವಿಶ್ರಾಂತಿ ವೇತನದಿಂದ ರೂ. 1,000/– (ಒಂದು ಸಾವಿರ ರೂಪಾಯಿ)ಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ 5 ವರ್ಷಗಳ ಅವಧಿಗೆ ಕಡಿತಗೊಳಿಸಬೇಕೆಂದು ಮತ್ತು ಇವರ ದುರ್ನಡತೆಯಿಂದ ಸರ್ಕಾರಕ್ಕೆ ಉಂಟಾದ ನಷ್ಟ ರೂ. 29,736/– ಗಳನ್ನು ಪಾವತಿ ಮಾಡಿದ ದಿನಾಂಕದಿಂದ ಇಂದಿನವರೆಗೆ ಶೇಕಡಾ 8ರಷ್ಟು ಬಡ್ಡಿಯೊಡನೆ 15 ಸಮಾನ ಕಂತುಗಳಲ್ಲಿ ವಸೂಲು ಮಾಡಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಸೇವೆಗಳು–3)

ಪಿ.ಆರ್. 1903

**ವಿಷಯ:** ಮೈಸೂರು ಅರಮನೆ ಉಸ್ತುವಾರಿಗಾಗಿ ಮಂಜೂರಾಗಿರುವ ತಾತ್ಕಾಲಿಕ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂ. ಡಿಪಿಎಆರ್ 2 ಪಿಎಸ್‌ಆರ್ 76, ದಿನಾಂಕ: 26.02.1976.
2. ಸರ್ಕಾರದ ಆದೇಶ ಸಂ. ಸಿಆಸುಇ 29, ಸೇಅವಿ 2001, ದಿನಾಂಕ: 09.08.2002
3. ಸರ್ಕಾರದ ಆದೇಶ ಸಂ.: ಸಿಆಸುಇ 24 ಸೇಅವಿ 2008, ದಿನಾಂಕ: 04.04.2008
4. ಕಾರ್ಯನಿರ್ವಹಣಾಧಿಕಾರಿ, ಅರಮನೆ ಮಂಡಲಿ, ಮೈಸೂರು, ಇವರ ಪತ್ರ ಸಂ: ಕಾನಿಅ: ಅಮಂ: ಇಎಸ್‌ಟಿ–1: ತಾತ್ಕಾಲಿಕ ಹುದ್ದೆ: 2008–09: 598, ದಿನಾಂಕ: 28.01.2009.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾಗಿರುವ ಸರ್ಕಾರಿ ಆದೇಶದಲ್ಲಿ ಮೈಸೂರು ಅರಮನೆ ಉಸ್ತುವಾರಿಗಾಗಿ ಕೆಲವು ತಾತ್ಕಾಲಿಕ ಹುದ್ದೆಗಳನ್ನು ಮಂಜೂರು ಮಾಡಲಾಗಿದೆ. ಮೇಲೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ರೂ. 5,200 – 9,500ರ ವೇತನ ಶ್ರೇಣಿಯ ಒಂದು ಕಛೇರಿ ಅಧೀಕ್ಷಕರ ಹುದ್ದೆಯನ್ನು ತಾತ್ಕಾಲಿಕವಾಗಿ ಸೃಜಿಸಲಾಗಿದೆ. ಈ ಎಲ್ಲಾ ಹುದ್ದೆಗಳನ್ನು ಕಾಲಕಾಲಕ್ಕೆ ಮುಂದುವರೆಸುತ್ತಾ ಬಂದಿದ್ದು, ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾಗಿರುವ ಸರ್ಕಾರಿ ಆದೇಶದಲ್ಲಿ 114 ವಿವಿಧ ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ: 01.04.2008 ರಿಂದ 31.03.2009ರವರೆಗೆ ಮುಂದುವರೆಸಲಾಗಿದೆ. ಮೇಲೆ (4) ರಲ್ಲಿ ಓದಲಾಗಿರುವ ಪತ್ರದಲ್ಲಿ ಕಾರ್ಯನಿರ್ವಾಹಕಾಧಿಕಾರಿ, ಮೈಸೂರು ಅರಮನೆ ಮಂಡಲಿ, ಮೈಸೂರು, ಇವರು ಮೇಲೆ ಉಲ್ಲೇಖಿಸಿರುವ 114 ವಿವಿಧ ಹುದ್ದೆಗಳ ಅವಧಿಯು ದಿನಾಂಕ: 31.03.2009ಕ್ಕೆ ಅಂತ್ಯಗೊಳ್ಳುವುದರಿಂದ ಎಲ್ಲಾ ಹುದ್ದೆಗಳನ್ನು ದಿನಾಂಕ: 01.04.2009 ರಿಂದ 31.03.2010ರವರೆಗೆ ಒಂದು ವರ್ಷದ ಅವಧಿಗೆ ಮುಂದುವರೆಸಿ ಸರ್ಕಾರಿ ಆದೇಶವನ್ನು ಹೊರಡಿಸುವಂತೆ ಪ್ರಸ್ತಾವನೆಯನನ್ನು ಸಲ್ಲಿಸಿರುತ್ತಾರೆ. ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದ ಸರ್ಕಾರವು 2009–10ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 2205–00–107–0–04 ಯೋಜನೇತರಡಿ ಮೈಸೂರು ಅರಮನೆ ನಿರ್ವಹಣೆಗೆ ಒಟ್ಟು 113 ಹುದ್ದೆಗಳು ಅಪೆಂಡಿಕ್ಸ್ – ಬಿ ನಲ್ಲಿರುವುದರಿಂದ ಒಂದು ಬೆರಳಚ್ಚುಗಾರರ ಹುದ್ದೆಯನ್ನು ಹೊರತುಪಡಿಸಿ 113 ಹುದ್ದೆಗಳನ್ನು ಮುಂದುವರೆಸಲು ನಿರ್ಣಯಿಸಿದೆ. ಅದರಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 20 ಸೇಅವಿ 2009, ಬೆಂಗಳೂರು, ದಿನಾಂಕ: 3ನೇ ಆಗಸ್ಟ್ 2009**

ಮೈಸೂರು ಅರಮನೆ ಮಂಡಲಿ, ಮೈಸೂರು, ಇಲ್ಲಿ ಅರಮನೆ ಉಸ್ತುವಾರಿಗಾಗಿ ಸೃಜಿಸಲಾಗಿರುವ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧ–1 ರಿಂದ 9ರವರೆಗೆ ನಮೂದಿಸಿರುವ 113 ವಿವಿಧ ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ 01.04.2009 ರಿಂದ 31.03.2010ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 205–ಕಲೆ ಮತ್ತು ಸಂಸ್ಕೃತಿ 107 – ಸಂಗ್ರಹಾಲಯ – 04 ಮೈಸೂರು ಅರಮನೆ ಉಸ್ತುವಾರಿ ವೇತನ (ಯೋಜನೇತರ) ಇದರಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 1996 ದಿನಾಂಕ: 10–07–1996 ರಲ್ಲಿ ಇಲಾಖೆಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ. (ಸೇವೆಗಳು–3)

**ಸರ್ಕಾರಿ ಆದೇಶ ಸಂ: ಸಿಆಸುಇ 20 ಸೇಅವಿ 2009, ದಿನಾಂಕ: 03.08.2009**

**ಅನುಬಂಧ – 1**

| ಕ್ರ. ಸಂ. | ಪದನಾಮ | | ಹುದ್ದೆಗಳ ಸಂಖ್ಯೆ |
|---|---|---|---|
| 1. | ಸಹಾಯಕ ಇಂಜಿನಿಯರ್ (ಸಿವಿಲ್) | : | 2 |
| 2. | ಪ್ರಥಮ ದರ್ಜೆ ಅಕೌಂಟ್ಸ್ ಸಹಾಯಕ | : | 1 |
| 3. | ಪ್ರಥಮ ದರ್ಜೆ ಪಿ. ಡಬ್ಲ್ಯು.ಡಿ. ಸಹಾಯಕರು | : | 1 |
| 4. | ಪ್ರಥಮ ದರ್ಜೆ ಸ್ಟೋರ್ಸ್ ಕೀಪರ್ | : | 1 |
| 5. | ಎರಡನೇ ದರ್ಜೆ ಸ್ಟೋರ್ಸ್ ಕೀಪರ್ | : | 1 |
| 6. | ಎರಡನೇ ದರ್ಜೆ ಪಿ. ಡಬ್ಲ್ಯು.ಡಿ. ಸಹಾಯಕರು | : | 2 |
| 7. | ಬೆರಳಚ್ಚುಗಾರ | : | 1 |
| 8. | ಅಟೆಂಡರ್ | : | 3 |
| 9. | ಸಹಾಯಕ ತೋಟಗಾರಿಕೆ ಅಧಿಕಾರಿ (ಗ್ರೇಡ್–1) | : | 1 |
| 10. | ತೋಟಗಾರಿಕಾ ಸಹಯಾಕ (ದರ್ಜೆ–3) | : | 2 |
| 11. | ವಾಚ್‌ಮನ್ | : | 1 |
| 12. | ಸ್ವೀಪರ್ | : | 23 |
| 13. | ಮಾಲಿ | : | 29 |
| 14. | ಪ್ಯೂನ್‌ಗಳು | : | 2 |
| 15. | ಪ್ಲಂಬರ್ | : | 1 |
| | **ಅನುಬಂಧ–2** | | |
| 1. | ಅಸಿಸ್ಟೆಂಟ್ ಎಕ್ಸಿಕ್ಯೂಟಿವ್ ಇಂಜಿನಿಯರ್ (ಎಲೆಕ್ಟ್ರಿಕಲ್) | : | 1 |
| 2. | ಸಹಾಯಕ ಇಂಜಿನಿಯರ್ | : | 2 |
| 3. | ಮೊದಲನೇ ದರ್ಜೆ ಸ್ಟೋರ್ ಕೀಪರ್ | : | 1 |
| 4. | ಮೊದಲನೇ ದರ್ಜೆ ಪಿ.ಡಬ್ಲ್ಯೂ.ಡಿ ಸಹಾಯಕ | : | 1 |
| 5. | ಮೊದಲನೇ ದರ್ಜೆ ವೈರ್‌ಮೆನ್ : ಮೆಕಾನಿಕ್ | : | 2 |
| 6. | ಎರಡನೇ ದರ್ಜೆ ವೈರ್‌ಮನ್: ಮೆಕಾನಿಕ್ | : | 7 |
| 7. | ಮೆಕಾನಿಕ್–ಕಂ–ಅಟೆಂಡರ್ | : | 2 |
| 8. | ಲೈನ್‌ಮನ್ | : | 8 |
| 9. | ಪ್ಯೂನ್ | : | 1 |
| 10. | ವಾಚ್‌ಮನ್ | : | 2 |

| ಕ್ರ. ಸಂ. | ಪದನಾಮ | | ಹುದ್ದೆಗಳ ಸಂಖ್ಯೆ |
|---|---|---|---|
| | **ಅನುಬಂಧ–3** | | |
| 1 | ಎರಡನೇ ದರ್ಜೆ ಸಹಾಯಕ | : | 1 |
| | **ಅನುಬಂಧ–4** | | |
| 1 | ' ಡಿ ' ಗ್ರೂಪ್ ಹುದ್ದೆಗಳು | : | 4 |
| 2 | ಮೊದಲನೇ ದರ್ಜೆ ಸಹಾಯಕ | : | 1 |
| | **ಅನುಬಂಧ–5** | | |
| 1 | ಗೈಡ್ ಲೆಕ್ಚರರ್ | : | 3 |
| 2 | ಲೆಕ್ಕ ಅಧೀಕ್ಷಕ | : | 1 |
| | **ಅನುಬಂಧ–6** | | |
| 1 | ಕ್ಯೂರೇಟರ್ (ಮೈಸೂರು ಅರಮನೆ) | : | 1 |
| | **ಅನುಬಂಧ–7** | | |
| 1 | ಜಾಡಮಾಲಿ | : | 1 |
| | **ಅನುಬಂಧ–8** | | |
| 1 | ಎರಡನೇ ದರ್ಜೆ ಸಹಾಯಕ | : | 1 |
| 2 | ಅಟೆಂಡರ್ | : | 1 |
| | **ಅನುಬಂಧ–9** | | |
| 1 | ಕಛೇರಿ ಅಧೀಕ್ಷಕ | : | 1 |
| | **ಒಟ್ಟು** | | **113 ಹುದ್ದೆಗಳು** |

**ಎಂ.ಎಸ್. ಶಿವರಾಮ್**

ಪಿ.ಆರ್. 1904 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ. (ಸೇವೆಗಳು–3)

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಮುಂಡರಗಿ ಪಂಚಾಯುತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗದಲ್ಲಿ ಉಗ್ರಾಣ ಕೊರತೆ ಹಾಗೂ ಹಣ ದುರುಪಯೋಗಕ್ಕೆ ಸಂಬಂಧಿಸಿದಂತೆ ಇಲಾಖಾ ವಿಚಾರಣೆ – ಆರೋಪಿತರಿಗೆ ದಂಡನೆ ವಿಧಿಸುವ ಬಗ್ಗೆ – ಆದೇಶ

**ಓದಲಾಗಿದೆ:**
1. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯುತ್, ಗದಗ ಇವರ ಪತ್ರ ಸಂಖ್ಯೆ: ಜಿಪಗ/ಸಿಬ್ಬಂದಿ/ಇವಿ/ಜಿ.ಬಿ. ನಂದಿ/ವಹಿ/102/3/4678, ದಿನಾಂಕ: 25.02.2004.
2. ಸರ್ಕಾರದ ಕಾರಣ ಕೇಳುವ ನೋಟೀಸ್ ದಿನಾಂಕ: 31.05.2004
3. ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 21 ಇಎನ್‌ಕ್ಯೂ 2004, ದಿನಾಂಕ : 19.11.2004
4. ಶ್ರೀ ಬಿ.ಎಲ್. ಶ್ರೀಕಂಠಯ್ಯ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಮತ್ತು ವಿಚಾರಣಾಧಿಕಾರಿಗಳು, ಇವರ ವಿಚಾರಣಾ ವರದಿ ದಿನಾಂಕ: 09.06.2008
5. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗದಗ, ಇವರ ಪತ್ರ ಸಂಖ್ಯೆ: ಜಿಪಗ/ಸಿಬ್ಬಂದಿ/ಇವಿ/ಜಿ.ಬಿ.ನಂದಿ/ವಹಿ/102/03–04 ದಿನಾಂಕ: 06.01.2009 ಮತ್ತು ದಿನಾಂಕ:04.07.2009
6. ಸರ್ಕಾರದ 2ನೇ ಕಾರಣ ಕೇಳುವ ನೋಟೀಸ್ ದಿನಾಂಕ: 21.07.2009
7. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗದಗ, ಇವರ ಪತ್ರ ಸಂಖ್ಯೆ:ಜಿಪಗ/ಸಿಬ್ಬಂದಿ/ಇವಿ/ಜಿ.ಬಿ. ನಂದಿ/ವಹಿ/102/03–04 ದಿನಾಂಕ: 28.07.2009.
8. ಶ್ರೀ ಜಿ. ಬಿ. ನಂದಿ, ಇವರು ಸಲ್ಲಿಸಿರುವ ಲಿಖಿತ ಹೇಳಿಕೆ ದಿನಾಂಕ: 05.08.2009.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ಪತ್ರದೊಂದಿಗೆ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗದಗ, ಇವರು ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಮುಂಡರಗಿ, ಇಲ್ಲಿ 1999 – 2000ನೇ ಸಾಲಿನಲ್ಲಿ ಭಾರಿ

ಪ್ರಮಾಣದ ಉಗ್ರಾಣ ಸಾಮಗ್ರಿಗಳ ಕೊರತೆಗೆ ಹಾಗೂ ಹಣ ದುರುಪಯೋಗಕ್ಕೆ ಶ್ರೀ ಜಿ.ಬಿ. ನಂದಿ, ಕಿರಿಯ ಇಂಜಿನಿಯರ್ ಮತ್ತು ಶ್ರೀ ಎಂ.ವಿ. ರಾಜಶೇಖರ, ಸಹಾಯಕ ಇಂಜಿನಿಯರ್ ಇವರುಗಳು ಮೇಲ್ನೋಟಕ್ಕೆ ಕಾರಣರಾಗಿರುವುದು ಕಂಡುಬಂದಿದ್ದರಿಂದ ಸದರಿ ಆಪಾದಿತರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ನಡೆಸಲು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದ್ದರು.

ಮೇಲೆ (2) ರಲ್ಲಿ ಓದಲಾದ ಕಾರಣ ಕೇಳುವ ನೋಟೀಸಿನೊಂದಿಗೆ ಸದರಿ ಆರೋಪಿತರಾದ ಶ್ರೀ ಜಿ.ಬಿ. ನಂದಿ, ಕಿರಿಯ ಇಂಜಿನಿಯರ್ ಮತ್ತು ಶ್ರೀ ಎಂ.ವಿ. ರಾಜಶೇಖರ, ಸಹಾಯಕ ಇಂಜಿನಿಯರ್ ಇವರುಗಳಿಗೆ ದೋಷಾರೋಪಣಾ ಪಟ್ಟಿಯನ್ನು ಅನುಬಂಧ–1 ರಿಂದ 4 ರಲ್ಲಿ ಜಾರಿ ಮಾಡಲಾಗಿತ್ತು. ಸದರಿ ಕಾರಣ ಕೇಳುವ ನೋಟೀಸಿಗೆ ಆರೋಪಿತರು ಸಲ್ಲಿಸಿದ್ದ ಲಿಖಿತ ಹೇಳಿಕೆಗಳನ್ನು ಹಾಗೂ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗದಗ ಇವರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಪ್ರಕರಣದಲ್ಲಿ ವಿವರವಾದ ಜಂಟಿ ಇಲಾಖಾ ವಿಚಾರಣೆ ನಡೆಸಲು ಮೇಲೆ (3) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಶ್ರೀ ಬಿ.ಎಲ್. ಶ್ರೀಕಂಠಯ್ಯ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಿಸಲಾಗಿತ್ತು.

ವಿಚಾರಣಾಧಿಕಾರಿಗಳು ಮೇಲೆ (4) ರಲ್ಲಿ ಓದಲಾದ ತಮ್ಮ ವಿಚಾರಣಾ ವರದಿಯಲ್ಲಿ ಆಪಾದಿತರ ಮೇಲೆ ಗುರುತರವಾದ ಮತ್ತು ಲಕ್ಷಾಂತರ ರೂಪಾಯಿಗಳ ಹಣ ದುರುಪಯೋಗದ ಆಪಾದನೆಗಳಿದ್ದರೂ ಸಹ ಮಂಡನಾಧಿಕಾರಿಗಳು ಎಷ್ಟೇ ಕಾಲಾವಕಾಶ ಕೊಟ್ಟರೂ ಸಾಕ್ಷಿದಾರರನ್ನು ಹಾಗೂ ದಸ್ತಾವೇಜುಗಳನ್ನು ಹಾಜರುಪಡಿಸಲು ವಿಫಲರಾದ ಬಗ್ಗೆ ಹಾಗೂ ಅಂತಿಮವಾಗಿ ದಿನಾಂಕ: 18.01.2006 ರಂದು ವಿಚಾರಣೆಯನ್ನು ನಿಗದಿಪಡಿಸಲಾಗಿ, ಆ ದಿನ ಹಾಜರಾಗಬೇಕೆಂದು ಸೂಚಿಸಿದ್ದರೂ ಸಹ ಮಂಡನಾಧಿಕಾರಿಯವರು ಹಾಜರಾಗದೇ ಇದ್ದುದರಿಂದ ಈ ಬಗ್ಗೆ ಸರ್ಕಾರಕ್ಕೆ ಪತ್ರ ಬರೆಯಲಾಗಿದ್ದರ ಮೇರೆಗೆ ಸರ್ಕಾರವು ಮಂಡನಾಧಿಕಾರಿಗಳಿಗೆ ಪ್ರಕರಣದ ವಿಚಾರಣೆಗೆ ತಪ್ಪದೇ ಹಾಜರಾಗಬೇಕೆಂದು ಆದೇಶಿಸಿದ್ದರೂ ನಂತರ ನಿಗದಿಪಡಿಸಿದ ವಿಚಾರಣೆ ದಿನಗಳಂದೂ ಕೂಡ ಮಂಡನಾಧಿಕಾರಿಯವರು ಗೈರು ಹಾಜರಾಗಿದ್ದರ ಬಗ್ಗೆ ತಿಳಿಸಿದ್ದಾರೆ. ಮುಂದುವರೆಸಿ, ಸರ್ಕಾರವು ಪುನ: ದಿನಾಂಕ: 09.03.2007 ರಂದು ಮಂಡನಾಧಿಕಾರಿಗೆ ಪತ್ರ ಬರೆದು ವಿಚಾರಣೆಯನ್ನು ಜರೂರಾಗಿ ಪೂರ್ಣಗೊಳಿಸುವ ನಿಟ್ಟಿನಲ್ಲಿ ಕ್ರಮ ಕೈಗೊಳ್ಳದಿದ್ದರೆ, ಸದರಿ ಕರ್ತವ್ಯಲೋಪಕ್ಕಾಗಿ ಶಿಸ್ತಿನ ಕ್ರಮ ಜರುಗಿಸಲಾಗುವುದೆಂದು ಸೂಚಿಸಿದ್ದನ್ನು ಅನುಸರಿಸಿ ಮತ್ತೆ ಮಂಡನಾಧಿಕಾರಿಗೆ ದಿನಾಂಕ 29.04.2008 ರಂದು ಸಾಕ್ಷಿಗಳನ್ನು ಹಾಜರುಪಡಿಸಲು ಮತ್ತೊಂದು ಅವಕಾಶ ಕೊಟ್ಟು ವಿಚಾರಣೆಯನ್ನು ನಿಗದಿಪಡಿಸಿದ್ದರೂ, ಆ ದಿನವೂ ಕೂಡ ಸಾಕ್ಷಿದಾರರು ಹಾಜರಾಗಲಿಲ್ಲವೆಂದು ವರದಿ ಮಾಡುತ್ತಾ, ಆಪಾದಿತ ನೌಕರ ಶ್ರೀ ಜಿ.ಬಿ. ನಂದಿ ಇವರ ಕೆ.ಎ.ಟಿ ಯಲ್ಲಿ ಅರ್ಜಿ ಸಲ್ಲಿಸಿದ್ದರ ಮೇರೆಗೆ, ನ್ಯಾಯ ಮಂಡಳಿಯು ಜೂನ್ 2008 ರೊಳಗೆ ಪ್ರಕರಣದ ವಿಚಾರಣೆಯನ್ನು ಮುಗಿಸಲು ನಿರ್ದೇಶನ ನೀಡಿದ್ದರಿಂದ ಶ್ರೀ ಕಲೀಲ್ ರೆಹಮಾನ್ ಇವರು ವರ್ಗಾವಣೆ ಆದ ಮೇಲೆ ಪ್ರಭಾರ ವಹಿಸಿಕೊಂಡ ಮುಖ್ಯ ಲೆಕ್ಕಾಧಿಕಾರಿಗಳು ಪ್ರಕರಣವನ್ನು ಪುನ: ಮುಂದೂಡಲು ವಿನಂತಿಸಿದ ಕೋರಿಕೆಯನ್ನು ನಿರಾಕರಿಸಿ ಪ್ರಕರಣವನ್ನು ಮುಕ್ತಾಯಗೊಳಿಸಲಾಯಿತೆಂದು ತಿಳಿಸಿರುವುದಲ್ಲದೆ ನಿಯಮಾವಳಿಗಳ ಪ್ರಕಾರ ಆರೋಪಗಳನ್ನು ರುಜುವಾತು ಮಾಡುವ ಜವಾಬ್ದಾರಿಯು ಶಿಸ್ತುಪ್ರಾಧಿಕಾರದ್ದೇ ಆಗಿದ್ದು, ಆರೋಪಿತ ಅಧಿಕಾರಿಗಳು ತಾವು ನಿರ್ದೋಷಿ ಎಂದು ರುಜುವಾತು ಮಾಡಿಕೊಳ್ಳುವ ಅವಶ್ಯಕತೆ ಇರುವುದಿಲ್ಲವೆಂದು ತಿಳಿಸುತ್ತಾ, ಸಾಕ್ಷ್ಯದ ಕೊರತೆಯಿಂದ ಆಪಾದಿತರ ಮೇಲೆ ಮಾಡಿರುವ ಆರೋಪಗಳು ರುಜುವಾತಾಗಿಲ್ಲವೆಂದು ನಿರ್ಧರಿಸಿ ವರದಿ ಸಲ್ಲಿಸಿರುತ್ತಾರೆ.

ಮುಖ್ಯ ಕಾರ್ಯನಿವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗದಗ ಇವರು ಮೇಲೆ (5) ರಲ್ಲಿ ಓದಲಾದ ದಿನಾಂಕ:06.01.2009 ಪತ್ರದಲ್ಲಿ ಶ್ರೀ ಜಿ.ಬಿ. ನಂದಿ, ಕಿರಿಯ ಇಂಜಿನಿಯರ್ ಮತ್ತು ಶ್ರೀ ಎಂ.ವಿ. ರಾಜಶೇಖರ, ಸಹಾಯಕ ಇಂಜಿನಿಯರ್ ಇವರುಗಳ ವಿರುದ್ಧದ ಜಂಟಿ ಇಲಾಖಾ ವಿಚಾರಣೆಯಲ್ಲಿ ಮಂಡನಾಧಿಕಾರಿಗಳ ನಿರ್ಲಕ್ಷ್ಯತನದಿಂದಾಗಿ ಸರ್ಕಾರಕ್ಕೆ ಪ್ರತಿಕೂಲ ವರದಿ ಬಂದಿದೆ ಎಂಬ ಅಂಶವನ್ನು ಪ್ರಸ್ತಾಪಿಸಿ, ಈ ಬಗ್ಗೆ ಅನುಬಂಧ – 3 ರಲ್ಲಿನ ದಾಖಲೆಗಳು ಹಾಗೂ ಅನುಬಂಧ – 4 ರಲ್ಲಿನ ಸಾಕ್ಷಿಗಳ ಅನುಸಾರ ಇತ್ಯರ್ಥ ಪಡಿಸಿದಲ್ಲಿ ನಿಜಾಂಶ ಕಂಡುಕೊಳ್ಳಲು ಸಾಧ್ಯವಾಗುತ್ತದೆ ಎಂದು ತಿಳಿಸಿ, ಪ್ರಕರಣವನ್ನು ಮರು ವಿಚಾರಣೆಗೆ ಒಳಪಡಿಸುವುದು ಸೂಕ್ತವೆಂದು ಅಭಿಪ್ರಾಯ ಪಟ್ಟಿರುತ್ತಾರೆ. ನಿಯಮಾನುಸಾರ ಒಮ್ಮೆ ವಿಚಾರಣೆ ಆದ ಪ್ರಕರಣವನ್ನು ಮತ್ತೆ ಮರು ವಿಚಾರಣೆ ಮಾಡಲು ಆಸ್ಪದವಿರುವುದಿಲ್ಲವಾದ ಕಾರಣ, ಸರ್ಕಾರವು ವಿಚಾರಣಾ ವಿಚಾರಣಾ ವರದಿಯನ್ನು ತಿರಸ್ಕರಿಸಿ ಕರ್ನಾಟಕ ಸಿವಿಲ್ ಸೇವೆ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ 11ಎ ಪ್ರಕಾರ ಪ್ರಕರಣವನ್ನು ಪರಿಶೀಲಿಸಿ, ದಿನಾಂಕ 04.07.2009ರ ಪತ್ರದಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗದಗ, ಇವರು ತಿಳಿಸಿರುವಂತೆ ಆರೋಪಿತರಿಂದ ಸರ್ಕಾರಕ್ಕೆ ಉಂಟಾದ ನಷ್ಟ ರೂ. 24,19,312.00 ಗಳನ್ನು ವಸೂಲಿ ಮಾಡಲು ಹಾಗೂ ಆರೋಪಿತರ ಮೇಲೆ ಸೂಕ್ತ ದಂಡನೆ ವಿಧಿಸುವ ಬಗ್ಗೆ ಪರಿಶೀಲಿಸಿ, ಸದರಿ ಆರೋಪಿತರಿಗೆ ಮೇಲೆ (6) ರಲ್ಲಿ ಓದಲಾದ 2ನೇ ಕಾರಣ ಕೇಳುವ ನೋಟೀಸನ್ನು ಜಾರಿಮಾಡಲಾಯಿತು.

ಮೇಲೆ (7) ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ಕಾರ್ಯನಿವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗದಗ, ಇವರು ಸರ್ಕಾರಕ್ಕೆ ವರದಿ ಮಾಡುತ್ತಾ, ದಾಖಲಾತಿಗಳನ್ನು ಪರಿಶೀಲಿಸಿಲಾಗಿ, ಪ್ರಕರಣದಲ್ಲಿ ಸರ್ಕಾರಕ್ಕೆ ಆದ ಒಟ್ಟು ನಷ್ಟ ರೂ. 24,19,312.00 ಗಳಿಗೆ ಶ್ರೀ ಜಿ.ಬಿ. ನಂದಿ, ಕಿರಿಯ ಇಂಜಿನಿಯರ್ ಮತ್ತು ಶ್ರೀ ಎಂ.ವಿ, ರಾಜಶೇಕರ, ಸಹಾಯಕ ಇಂಜಿನಿಯರ್ ಇವರುಗಳು ಜಂಟಿಯಾಗಿ ಹೊಣೆಗಾರರಾಗಿರುತ್ತಾರೆಂದು ತಿಳಿಸಿರುತ್ತಾರೆ.

ಮೇಲೆ (8) ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ಜಿ.ಬಿ. ನಂದಿ, ನಿವೃತ್ತ ಕಿ.ಇಂ. ರವರು ಸರ್ಕಾರಕ್ಕೆ 2ನೇ ಕಾರಣ ಕೇಳುವ ನೋಟೀಸಿಗೆ ಉತ್ತರ ಸಲ್ಲಿಸುತ್ತಾ, ವಿಚಾರಣಾಧಿಕಾರಿಗಳು ತಮ್ಮ ವರದಿಯಲ್ಲಿ ಮಂಡನಾಧಿಕಾರಿಗಳು ಯಾವುದೇ ಸಾಕ್ಷಿಗಳನ್ನು ಮತ್ತು ದಾಖಲೆಗಳನ್ನು ಒದಗಿಸದೇ ಕರ್ತವ್ಯಲೋಪ ಎಸಗಿರುವ ಬಗ್ಗೆ ಸ್ಪಷ್ಟವಾಗಿ ತಿಳಿಸಿದ್ದು, ಪ್ರಸ್ತುತ ಯಾವ ಸಾಕ್ಷ್ಯಾಧಾರಗಳನ್ನು ಪರಿಗಣಿಸಿ ಸರ್ಕಾರವು 2ನೇ ಕಾರಣ ಕೇಳುವ ನೋಟೀಸ್ ಜಾರಿ ಮಾಡಿರುತ್ತದೆ ಎಂದು ಪ್ರಶ್ನಿಸಿ, ಸದರಿ ನೋಟೀಸ್ ಜಾರಿ ಮಾಡಿದ ಕ್ರಮವು ಕಾನೂನು ಬಾಹಿರವಾಗಿರುತ್ತದೆ ಎಂದು ತಿಳಿಸುತ್ತಾ, ಪ್ರಕರಣದಲ್ಲಿ ಇಲಾಖಾ ವಿಚಾರಣೆಯು ಸುದೀರ್ಘಅವಧಿಯಿಂದ ನಡೆದಿದ್ದು, ಇದರಿಂದ ತಮಗೆ ತೀವ್ರ ತೊಂದರೆಯಾಗಿರುತ್ತದೆ ಎಂದು ತಿಳಿಸಿರುತ್ತಾರೆ. ಅಲ್ಲದೆ, ಪ್ರಕರಣದಲ್ಲಿ ಕರ್ತವ್ಯ ಲೋಪ ಎಸಗಿದ ಮಂಡನಾಧಿಕಾರಿಯವರ ವಿರುದ್ಧ ಹಾಗೂ ವಿಚಾರಣೆ ಅಂತಿಮಗೊಳಿಸುವಲ್ಲಿ ವಿಳಂಬ ಮಾಡಿದ ಅಧಿಕಾರಿಗಳ ವಿರುದ್ಧ ಕ್ರಮ ಜರುಗಿಸಲು ಕೋರಿ, ಪ್ರಕರಣದಲ್ಲಿ ತಾವು ನಿರ್ದೋಷಿ ಎಂದು ಅರಿಕೆ ಮಾಡಿಕೊಳ್ಳುತ್ತಾ , ನ್ಯಾಯ ಸಮ್ಮತ ನಿರ್ಣಯ ಕೈಗೊಳ್ಳಲು ಕೋರಿರುತ್ತಾರೆ.

ಪ್ರಕರಣದಲ್ಲಿ ಇನ್ನೊಬ್ಬ ಆರೋಪಿತರಾದ ಶ್ರೀ ಎಂ.ವಿ. ರಾಜಶೇಖರ, ಸಹಾಯಕ ಇಂಜಿನಿಯರ್, ಇವರು ನಿಗದಿತ ಅವಧಿಯಲ್ಲಿ ಯಾವುದೇ ಉತ್ತರ / ಲಿಖಿತ ಹೇಳಿಕೆ ಸಲ್ಲಿಸಿರುವುದಿಲ್ಲ.

ಸರ್ಕಾರವು ಶ್ರೀ ಜಿ.ಬಿ. ನಂದಿ, ಇವರು ಸಲ್ಲಿಸಿರುವ ಲಿಖಿತ ಹೇಳಿಕೆಯನ್ನು ಒಳಗೊಂಡಂತೆ ಪ್ರಕರಣವನ್ನು ಸಮಗ್ರವಾಗಿ ಪರಿಶೀಲಿಸಿ, ಶ್ರೀ ಜಿ.ಬಿ. ನಂದಿ, ಕಿರಿಯ ಇಂಜಿನಿಯರ್ ಮತ್ತು ಶ್ರೀ ಎಂ.ವಿ. ರಾಜಶೇಖರ್, ಸಹಾಯಕ ಇಂಜಿನಿಯರ್ ಇವರುಗಳಿಂದ ಸರ್ಕಾರಕ್ಕೆ ಉಂಟಾದ ನಷ್ಟವನ್ನು ಸಮನಾಗಿ ಶೇಕಡಾ 8ರ ಬಡ್ಡಿಯೊಂದಿಗೆ ವಸೂಲಿ ಮಾಡಲು ಹಾಗೂ ಅವರ ಮೇಲೆ ದಂಡನೆಯನ್ನು ವಿಧಿಸಲು ನಿರ್ಧರಿಸಿ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಗ್ರಾಅಪ 21 ಇಎನ್‌ಕ್ಯೂ 04, ಬೆಂಗಳೂರು, ದಿನಾಂಕ: 13ನೇ ಆಗಸ್ಟ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಜಿ.ಬಿ. ನಂದಿ, ಅಂದಿನ ಕಿರಿಯ ಇಂಜಿನಿಯರ್ (ಪ್ರಸ್ತುತ ನಿವೃತ್ತ) ಹಾಗೂ ಶ್ರೀ ಎಂ.ವಿ. ರಾಜಶೇಖರ, ಅಂದಿನ ಸಹಾಯಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಮುಂಡರಗಿ (ಪ್ರಸ್ತುತ ಸಹಾಯಕ ಇಂಜಿನಿಯರ್, ಪಿ.ಎಂ. ಜೆ.ಎಸ್.ವೈ, ವಿಭಾಗ, ಹಾವೇರಿ) ಇವರಿಂದ ಸರ್ಕಾರಕ್ಕೆ ಉಂಟಾದ ಒಟ್ಟು ನಷ್ಟ ರೂ. 24,19,352.00 ಗಳನ್ನು (ಇಪ್ಪತ್ತ ನಾಲ್ಕು ಲಕ್ಷ ಹತ್ತೊಂಭತ್ತು ಸಾವಿರದ ಮುನ್ನೂರ ಐವತ್ತೆರಡು ರೂಪಾಯಿಗಳು ಮಾತ್ರ) 1999 – 2000ನೇ ಸಾಲಿನಿಂದ ಅನ್ವಯವಾಗುವಂತೆ ಶೇಕಡಾ 8ರ ಬಡ್ಡಿಯೊಂದಿಗೆ ಸಮ ಪ್ರಮಾಣದಲ್ಲಿ ವಸೂಲಿ ಮಾಡಲು ಆದೇಶಿಸಿದೆ.

ಅಲ್ಲದೆ, ಪ್ರಕರಣದಲ್ಲಿ ಸಾಬೀತಾದ ಆರೋಪಗಳಿಗಾಗಿ ಆರೋಪಿತರಾದ ಶ್ರೀ ಜಿ.ಬಿ. ನಂದಿ, ಅಂದಿನ ಕಿರಿಯ ಇಂಜಿನಿಯರ್ (ಪ್ರಸ್ತುತ ನಿವೃತ್ತ) ಇವರ ನಿವೃತ್ತಿ ವೇತನದಲ್ಲಿ ಶೇಕಡಾ 5ರಷ್ಟನ್ನು ಕೆ.ಸಿ.ಎಸ್.ಆರ್. ನಿಯಮ 214ರನ್ವಯ ಎರಡು ವರ್ಷಗಳ ಕಾಲ ಕಡಿತಗೊಳಿಸಲು ಹಾಗೂ ಕರ್ನಾಟಕ ಸಿವಿಲ್ ಸೇವೆ (ವರ್ಗೀಕರಣ, ನಿಯಂತ್ರಣ, ಮತ್ತು ಅಪೀಲು) ನಿಯಮಗಳು 1957ರ ನಿಯಮ 8 (iii) ರನ್ವಯ ಶ್ರೀ ಎಂ.ವಿ. ರಾಜಶೇಖರ, ಅಂದಿನ ಸಹಾಯಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಮುಂಡರಗಿ, ಇವರ ಎರಡು ವಾರ್ಷಿಕ ವೇತನಗಳನ್ನು ಸಂಚಿತ ಪರಿಣಾಮದೊಂದಿಗೆ ತಡೆಹಿಡಿಯುವ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಶ್ರೀ ಜಿ.ಬಿ. ನಂದಿ ಇವರಿಂದ ಮೇಲಿನಂತೆ ವಸೂಲಿ ಮಾಡಬೇಕಾಗಿರುವ ಮೊತ್ತವನ್ನು ಲೆಕ್ಕಾಚಾರ ಮಾಡಿ, ಸದರಿ ಮೊತ್ತವನ್ನು ಅವರಿಗೆ ಲಭ್ಯವಾಗುವ ನಿವೃತ್ತಿ ಸೌಲಭ್ಯಗಳಿಂದ ಹೊಂದಾಣಿಕೆ ಮಾಡಿಕೊಳ್ಳುವಂತೆ ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು, ಇವರಿಗೆ ತಿಳಿಸಿದೆ.

ಹೊಂದಾಣಿಕೆಯ ನಂತರವೂ ಉಳಿಯುವ ಮೊತ್ತವನ್ನು ಕಂದಾಯ ಬಾಕಿಯೆಂದು ಪರಿಗಣಿಸಿ ವಸೂಲಿ ಮಾಡಲು ಸೂಕ್ತ ಕ್ರಮ ತೆಗೆದುಕೊಳ್ಳುವಂತೆ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗದಗ, ಇವರಿಗೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ವೈ. ಸಾಗರ**

ಪಿ.ಆರ್. 1931

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು–ಎ)

ಗ್ರಾಮೀಣಾಬಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.